# ಅಚಲ

ತಿಂಗಳ ಪತ್ರಿಕೆ

ಏಪ್ರಿಲ್ - 2003

## ಒಳಗೇನಿದೆ



ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು

# ಅಚಲ

ಸಂಪುಟ - 18 ಸಂಚಿಕೆ : 3-4

ಸಂಪಾದಕ ಮಂಡಲಿ

ಎನ್. ಗಾಯತ್ರಿ

ನೇಮಿಚಂದ್ರ, ದೇವಿ,

ಶಾಂತಾನಾಗರಾಜ್

ಹೆಚ್. ಎಸ್: ಗೀತಾ

ಹೇಮಲತಾ ಮಹಿಷಿ

ಪ್ರಕಾಶಕರು

ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ, ಬೆಂಗಳೂರು


ಚಂದಾ ಹಣವನ್ನು ಚೆಕ್‌ನಲ್ಲಿ ಕಳುಹಿಸುವವರು ರೂ. 10 ಬ್ಯಾಂಕ್ ಕಮೀಷನ್ ಸೇರಿಸಿ ಕಳುಹಿಸಬೇಕು. ಎಂ. ಓ. ಫಾರ್ಮಿನ ಕೊನೆಯ ಭಾಗದಲ್ಲಿ ತಮ್ಮ ಹೆಸರು ವಿಳಾಸಗಳನ್ನು ಸ್ಪಷ್ಟವಾಗಿ ನಮೂದಿಸಬೇಕು.

ಬದಲಾದ ವಿಳಾಸವನ್ನು ದಯವಿಟ್ಟು ಬರೆದು ತಿಳಿಸಿ.


**Achala - Edited by**
**Dr. N. Gayathri**

**Published by**
**Dr. G. Ramakrishna on behalf of Jagruthi Mahila Adhyayana Kendra**

**Printed at**
Lipi Mudrana
**Bangalore - 560 004**


ಆತ್ಮೀಯರೆ,

ಹಲವಾರು ಅನಿವಾರ್ಯ ಕಾರಣಗಳಿಂದ ಮಾರ್ಚ್ ಸಂಚಿಕೆಯನ್ನು ತರಲಾಗಲಿಲ್ಲ ದಯವಿಟ್ಟು ಕ್ಷಮಿಸಿ. ಈ ಪತ್ರಿಕೆಯು ಇನ್ನೂ ಹೆಚ್ಚು ಅರ್ಥಪೂರ್ಣವಾಗಿ ಪ್ರಕಟವಾಗಬೇಕಾದರೆ ನಿಮ್ಮೆಲ್ಲರ ಸಲಹೆ, ಸಹಕಾರ ಮತ್ತು ಕ್ರಿಯಾತ್ಮಕ ಭಾಗವಹಿಸುವಿಕೆ ಮುಖ್ಯ. ಪತ್ರಿಕೆಯನ್ನು ನಿಮ್ಮ ವಿಚಾರಗಳ ವೇದಿಕೆಯಾಗಿ ಮಾಡಿಕೊಂಡು ಅರ್ಥಪೂರ್ಣ ಸಂವಾದಕ್ಕೆ ಮತ್ತು ಚಳುವಳಿಗೆ ನೆರವಾಗಿ.

ಯಾವುದೇ ವಿವರಗಳನ್ನು ಬರೆಯದ ಚಂದಾಹಣವು ಹಲವಾರು ಎಂ.ಓ ಗಳಲ್ಲಿ ನಮಗೆ ತಲುಪಿದೆ. ಚಂದಾದಾರರು ದಯವಿಟ್ಟು ಎಂ.ಓ ಫಾರ್ಮಿನ ಹಿಂಭಾಗದಲ್ಲಿ ವಿಳಾಸವನ್ನು ಬರೆಯಿರಿ.

ಅಚಲದ ಚಂದಾ ವಿವರಗಳು ಹೀಗಿವೆ

ವಾರ್ಷಿಕ ಚಂದಾ - ರೂ. 40/- (ವ್ಯಕ್ತಿಗಳಿಗೆ)

ರೂ. 75/- (ಸಂಸ್ಥೆಗಳಿಗೆ)

ಅಜೀವ ಚಂದಾ - ರೂ. 300/- (ವ್ಯಕ್ತಿಗಳಿಗೆ)

ರೂ. 400/- (ಸಂಸ್ಥೆಗಳಿಗೆ)


ಅಚಲ ವಿಳಾಸ

108, ಸ್ಕೈಲೈನ್ ಸುರಭಿ, 14-ಪಿ, ವಿದ್ಯಾಪೀಠ ರಸ್ತೆ,
ಬನಶಂಕರಿ 3ನೇ ಹಂತ, ಬೆಂಗಳೂರು - 560 085

# ಗುಬ್ಬಿಯ ಮೇಲೆ ಬ್ರಹ್ಮಾಸ್ತ್ರ

ಇರಾಕಿನ ಮೇಲೆ ಮೂರು ವಾರಗಳಿಗೂ ಹೆಚ್ಚು ಕಾಲ ಆಕ್ರಮಣ ನಡೆಸಿದ ಬ್ರಿಟನ್ ಮತ್ತು ಅಮೇರಿಕಾದ ಪಡೆಗಳು ನಡೆಸಿದ ಭೀಕರ ಯುದ್ಧದ ರೀತಿ, ಸ್ವರೂಪ ಮತ್ತು ಕಾರಣಗಳು ಎಲ್ಲ ಅಂತರರಾಷ್ಟ್ರೀಯ ನಿಯಮ - ಒಡಂಬಡಿಕೆಗಳನ್ನು ಗಾಳಿಗೆ ತೂರಿವೆ. ಈ ಯುದ್ಧ ಅನ್ಯಾಯದ್ದು, ಅಕ್ರಮವಾದ್ದು ಮತ್ತು ಅಮಾನುಷವಾದದ್ದು ಎಂದು ಒಕ್ಕೊರಲಿನಿಂದ ಜಗತ್ತಿನ ಜನತೆಯೆಲ್ಲಾ ಕೂಗುತ್ತಿದ್ದರೂ ಇದಕ್ಕೆ ಕಿವಿಗೊಡದ ಸರ್ವಾಧಿಕಾರಿ, ಸಾಮ್ರಾಜ್ಯಶಾಹಿಯ ಸಾಕಾರವಾಗಿರುವ ಅಮೇರಿಕಾ ಮಾತ್ರ ತಾನು ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವದ ಗುತ್ತಿಗೆ ತೆಗೆದುಕೊಂಡಿರುವಂತೆ ಮೆರೆಯುತ್ತಿರುವುದು ಅತ್ಯಂತ ಅಸಹ್ಯದ ಸಂಗತಿ. ಆರ್ಥಿಕ ದಿಗ್ಬಂದನವನ್ನು ಹನ್ನೆರಡು ವರ್ಷಗಳಿಂದ ಎದುರಿಸಿ ಹಣ್ಣಾಗಿದ್ದ ಇರಾಕಿನ ಮೇಲೆ ಈಗ ಬಂದೆರಗಿದ ಈ ಯುದ್ಧ ಅಮೇರಿಕ ಮತ್ತು ಬ್ರಿಟನ್ನಿನ ಬರ್ಬರತೆಯನ್ನು ಒಂದು ಕಡೆ ತೋರಿಸಿದರೆ, ಮತ್ತೊಂದು ಕಡೆ ಇಡೀ ವಿಶ್ವದ ಅಸಹಾಯಕತೆ, ಅವಕಾಶವಾದಿತ್ವಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಇಂತಹ ನಿರಾಶಾವಾದಿತ್ವದ ನಡುವೆಯೂ ಯುದ್ಧ ವಿರೋಧಿಸಿ ತಮ್ಮ ಅಧಿಕಾರ ತ್ಯಜಿಸಿದ ಬ್ರಿಟನ್ ಮತ್ತು ಅಮೇರಿಕಾದ ಕೆಲವು ಅಧಿಕಾರಿಗಳು ಅಭಿನಂದನಗೆ ಅರ್ಹರಾಗಿದ್ದಾರೆ.

ಇರಾಕಿನಲ್ಲಿ ಪ್ರಜಾಪ್ರಭುತ್ವ ಸ್ಥಾಪಿಸುತ್ತೇನೆಂದೂ, ಅಲ್ಲಿನ ಸಮೂಹನಾಶಕ ಅಸ್ತ್ರಗಳನ್ನು ವಶಪಡಿಸಿಕೊಂಡು ವಿಶ್ವಶಾಂತಿ ಉಂಟುಮಾಡಲೆಂದು ಯುದ್ಧ ಮಾಡುತ್ತಿರುವುದಾಗಿ ಅಮೇರಿಕಾ ಘೋಷಿಸಿಕೊಂಡರೂ ಅಮೇರಿಕದ ಯುದ್ಧ ಕೋರ ನೀತಿ, ಹಗಲು ದರೋಡೆ ಇಡೀ ವಿಶ್ವಕ್ಕೆ ಜಾಹೀರಾಗಿದೆ. ಇರಾಕಿನ ಸಂಪತ್ತೇ ಇರಾಕಿನ ಭದ್ರತೆಗೆ, ಭವ್ಯತೆಗೆ ಮುಳುವಾಗಿದೆ. ಆದ್ದರಿಂದ ಸತತವಾಗಿ ಒಂದು ಶತಮಾನದಿಂದಲೂ ಇಲ್ಲಿನ ಸಂಪತ್ತಿನ ಆಸೆಯಿಂದಲೇ ಇರಾಕ್ ಮೇಲೆ ಆಕ್ರಮಣ, ಲೂಟಿ ನಡೆಸಲಾಗಿದೆ. ಈಗ ನಡೆದ ಯುದ್ಧವಂತೂ ಇರಾಕ್ ಮತ್ತೆ ರಾಷ್ಟ್ರವಾಗಿ ಚೇತರಿಸಿಕೊಳ್ಳಲಾಗದಂತೆ, ನೆಲಕಚ್ಚುವಂತೆ ಮಾಡಿದೆ. ಅಮೇರಿಕಾದ ಆಕ್ರಮಣದಿಂದಾಗಿ ಕಳೆದ ಏಳುವರ್ಷಗಳಲ್ಲಿ ಸುಮಾರು ಹನ್ನೆರಡು ಲಕ್ಷ ಇರಾಕಿಯರು ಸತ್ತಿದ್ದಾರೆ. ಅಮಾಯಕ ಜನಸಾಮಾನ್ಯರ, ನಿಸ್ಸಹಾಯಕ ಮಹಿಳೆಯರ, ಕಂದಮ್ಮಗಳ ಮಾರಣ ಹೋಮಕ್ಕೆ ಅಮೇರಿಕಾ ಯಾವ ಸಮರ್ಥನೆ ಕೊಟ್ಟರೂ ನಂಬುವವರಿಲ್ಲ.

ನಾಗರಿಕ ಜಗತ್ತು ಎಂದೂ ಕಂಡು ಕೇಳರಿಯದ ಈ ಯುದ್ಧವನ್ನು ಪ್ರತಿಭಟಿಸಿ ಇರಾಕಿನ ಜನತೆಯ ಪರವಾಗಿ, ಶಾಂತಿಯ ಉದ್ದೇಶಕ್ಕಾಗಿ ಹೋರಾಡಲು ಎಲ್ಲ ವರ್ಗದ ಜನಸಮುದಾಯ - ಕಾರ್ಮಿಕರು, ಬುದ್ಧಿಜೀವಿಗಳು, ಕಲಾವಿದರು ಒಟ್ಟಾರೆಯಾಗಿ ಬೀದಿಗಿಳಿಯುತ್ತಿದ್ದಾರೆ. ಇರಾಕಿನ ವಿರುದ್ಧದ ಯುದ್ಧ ಅಷ್ಟೇ ಅಲ್ಲ, ಯಾವುದೇ ಯುದ್ಧ ಜಗತ್ತಿನ ಸಮಸ್ಯೆಗಳಿಗೆ ಪರಿಹಾರವಲ್ಲ, ಎಂಬುದು ಶಾಂತಿಪ್ರಿಯ ಜನರ ಒಕ್ಕೊರಲ ಕೂಗಾಗಿದೆ. ಅಷ್ಟೇ ಅಲ್ಲ, ಇರಾಕಿನ ತೈಲ ಸಂಪತ್ತನ್ನು ಕೊಳ್ಳೆ ಹೊಡೆಯಲು ಮತ್ತು ತನ್ನ ಶಸ್ತ್ರಾಸ್ತ್ರಗಳ ಸಾಮರ್ಥ್ಯವನ್ನು ಜಗತ್ತಿಗೆ ಪ್ರದರ್ಶಿಸಲು ಅಮೇರಿಕಾ ಕೈಗೊಂಡ ಈ ಯುದ್ಧವನ್ನು ಪ್ರತಿಭಟಿಸುವುದು ಕೂಡ ಜಗತ್ತಿನ ಎಲ್ಲ ಜನಸಮುದಾಯದ ನೈತಿಕ ಕರ್ತವ್ಯವಾಗಬೇಕು.

ಭಯೋತ್ಪಾದನೆಯನ್ನು ಜಗತ್ತಿನಲ್ಲಿ ಮೊಟ್ಟಮೊದಲಿಗೆ ಹುಟ್ಟಿ ಹಾಕಿದ ಅಮೇರಿಕಾ ಕಳೆದ ಸೆಪ್ಟೆಂಬರ್ 11ರ ಘಟನೆಯ ನಂತರವೂ ಬುದ್ದಿ ಕಲಿಯಲಿಲ್ಲ. ಈಗ ಜಗತ್ತಿನೆಲ್ಲೆಡೆ ಭಯೋತ್ಪಾದಕರನ್ನು ಮಟ್ಟಹಾಕುವ ಪ್ರತಿಜ್ಞೆಯಿಂದ ವಿಶ್ವಸಂಸ್ಥೆಯನ್ನು ಧಿಕ್ಕರಿಸಿ ಆಫ್‌ಘಾನಿಸ್ತಾನವನ್ನು ಧೂಳೀಪಟಮಾಡಿದ್ದನ್ನು ಹಿಂದೆ ನೋಡಿದ್ದೇವೆ. ಇದೇ ಅವಸ್ಥೆ ಈಗ ಇರಾಕ್‌ಗೆ ಬಂದಿದೆ. ಮುಂದೆ ಸಿರಿಯಾ, ಕೊರಿಯಾ ಪಟ್ಟಿ ಬೆಳೆಯುತ್ತಾ ಇಂಡಿಯಾವರೆಗೂ ಬಂದರೆ ಆಶ್ಚರ್ಯವಿಲ್ಲ.

ಪ್ರಜಾಪ್ರಭುತ್ವ ರಾಷ್ಟ್ರಗಳಲ್ಲಿ ಬೃಹತ್ ರಾಷ್ಟ್ರವೆಂದು ಹೇಳಿಕೊಳ್ಳುವ ಭಾರತ ಸರ್ಕಾರಕ್ಕೆ ಸ್ವಾಭಿಮಾನವಿರುವುದೇ ಆದರೆ ಅಮೇರಿಕಾ ಮತ್ತು ಬ್ರಿಟನ್ನಿನೊಂದಿಗೆ ಎಲ್ಲ ರಾಜತಾಂತ್ರಿಕ ಸಂಬಂಧವನ್ನು ಕಡಿದುಕೊಳ್ಳಬೇಕು. ಮತ್ತೊಂದು ಮುಖ್ಯ ಹೆಜ್ಜೆಯೆಂದರೆ ಈ ಎರಡೂ ರಾಷ್ಟ್ರಗಳ ಆರ್ಥಿಕತೆಗೆ ಪೆಟ್ಟು ನೀಡಲು ಆ ದೇಶಗಳ ಸರಕುಗಳನ್ನು ಭಾರತದಲ್ಲಿ ಬಹಿಷ್ಕರಿಸಬೇಕು. ಈ ಬಹಿಷ್ಕಾರ ಚಳುವಳಿಯನ್ನು ಪ್ರಗತಿಪರ ಜನಸಮುದಾಯ ಈಗಾಗಲೇ ಕೈಗೆತ್ತಿಕೊಂಡಿದೆ. ಆದರೆ ಇಂತಹ ಚಳುವಳಿಯನ್ನು ಭಾರತ ಸರ್ಕಾರವೂ ನೀತಿಯಾಗಿ ಒಪ್ಪಿಕೊಂಡರೆ ಆಗ ನಿಜವಾಗಿಯೂ ಅದೊಂದು ದಿಟ್ಟತನದ ಮತ್ತು ಸ್ವಾಭಿಮಾನದ ಹೆಜ್ಜೆಯಾದೀತು. ಆಗ ಇರಾಕಿ ಜನರಿಗೆ ನಾವು ತೋರಿಸುವ ಬೆಂಬಲಕ್ಕೊಂದು ಅರ್ಥ ಬಂದೀತು.

# ಸರಕಾರಿ ಮಹಿಳಾ ದಿನ

ಅಂತರರಾಷ್ಟ್ರೀಯ ಮಹಿಳಾದಿನ ಮಹಿಳೆಯರು ತಮ್ಮ ಹಕ್ಕುಗಳ ಬಗ್ಗೆ ಜಾಗೃತರಾಗಿ ಹೋರಾಟದಲ್ಲಿ ಕ್ರಿಯಾಶೀಲರಾಗಬೇಕಾದ್ದನ್ನು ನೆನಪಿಸುವ ದಿನ. ತೊಂಭತ್ತಾರು ವರ್ಷಗಳ ಹಿಂದೆ ನ್ಯೂಯಾರ್ಕಿನ ಧೀರೋದಾತ್ತ ಮಹಿಳೆಯರು ಬೀದಿಗಿಳಿದು ದುಡಿಯುವ ಮಹಿಳೆಯರ ಸ್ಥಿತಿಗತಿಗಳನ್ನು ಉತ್ತಮಪಡಿಸಲು ಹೋರಾಡಿದ ದಿನ. ಅಂದಿನಿಂದ ಇಂದಿನವರೆಗೂ ವಿಶ್ವದಾದ್ಯಂತ ವಿವಿಧ ಮಹಿಳಾ ಸಮುದಾಯವು ನಡೆಸಿದ ಚಳುವಳಿ ಮಹಿಳೆಗೆ ಘನತೆಯನ್ನು ತಂದುಕೊಡುವಂತಹುದು. ಅಷ್ಟೇ ಅಲ್ಲ ಶತಮಾನದಿಂದ ನಡೆದ ದೀರ್ಘ ಚಳುವಳಿಯಲ್ಲಿ ಹೋರಾಡಿದ ಮಹಿಳೆಯರಿಗೆ ಗೌರವ ತರುವಂತಹುದು. ಆದರೆ ಈ ಬಾರಿಯ ಮಹಿಳಾದಿನ ಎಂತಹ ಅಪಮೌಲ್ಯಕ್ಕೀಡಾಯ್ತು ಎನ್ನುವುದು ಮಹಿಳಾ ಚಳುವಳಿಗೆ ಅವಮಾನ ಮಾಡಿದಂತೆ.

ಜನರಿಂದ ಚುನಾಯಿತವಾದ ಕರ್ನಾಟಕದ ಕಾಂಗ್ರೆ ಸರ್ಕಾರ ತನ್ನದೇ ಆದ ರೀತಿಯಲ್ಲಿ ಮಹಿಳಾ ದಿನವನ್ನು ಆಚರಿಸಿದ್ದು ಈ ಬಾರಿಯ ವಿಶೇಷ. ಈ ಸರಕಾರಿ ಮಹಿಳಾ ದಿನವನ್ನು ಆಯೋಜಿಸಿದ್ದು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಹಾಗೂ ರಾಜ್ಯ ಮಹಿಳಾ ಅಭಿವೃದ್ಧಿ ನಿಗಮ. ಒಂದು ಮಹಿಳೆಯರ ಮತ್ತು ಮಕ್ಕಳ ಕಲ್ಯಾಣವನ್ನು ಸಾಧಿಸಲು ಕಾರ್ಯನಿರ್ವಹಿಸುತ್ತಿರುವ ಸಂಸ್ಥೆ, ಮತ್ತೊಂದು ಮಹಿಳೆಯರ ಅಭಿವೃದ್ಧಿಗಾಗಿ ಕಾರ್ಯನಿರ್ವಹಿಸುತ್ತಿರುವ ಹಣಕಾಸು ಸಂಸ್ಥೆ. ಇಂತಹ ಉದಾತ್ತ ಉದ್ದೇಶಗಳ ಹಿನ್ನೆಲೆಯಲ್ಲಿ ಯೋಜಿತವಾದ 'ಅಂತರಾಷ್ಟ್ರೀಯ ಮಹಿಳಾ ದಿನಾಚರಣೆ - 2003'ನ್ನು ಉದ್ಘಾಟಿಸುತ್ತಾ ಮಾನ್ಯ ಮುಖ್ಯಮಂತ್ರಿಗಳು ಮಾಡಿದ ಭಾಷಣ ಮಹಿಳಾದಿನದ ಮೂಲ ಉದ್ದೇಶಕ್ಕೆ ತಿಲಾಂಜಲಿಯನ್ನು ನೀಡಿದಂತಾಗಿತ್ತು. ಮಧ್ಯಪಾನ, ಲಾಟರಿ, ಜೂಜು ಮುಂತಾದ ದುಶ್ಚಟಗಳಿಂದ ಹೆಂಗಸರ, ಕುಟುಂಬದ ನೆಮ್ಮದಿ ಹಾಳಾಗುತ್ತಿರುವುದನ್ನು ಒಪ್ಪಿಕೊಂಡರೂ ಅದನ್ನು ನಿಷೇಧಿಸುವ. ಜವಾಬ್ದಾರಿ ಸರ್ಕಾರದ್ದಲ್ಲವೆಂದು ಮುಖ್ಯ ಮಂತ್ರಿಗಳು ಕೈ ತೊಳೆದುಕೊಂಡುಬಿಟ್ಟರು. ಇನ್ನು ಮುಂದುವರೆದಂತೆ, ಈ ದುಶ್ಚಟಗಳಿಂದ ಗಂಡಸರನ್ನು ದೂರವಿರುವಂತೆ, ಮಾಡುವ ಜವಾಬ್ದಾರಿ ಮನೆಯ ಹೆಂಗಸರ ಮೇಲಿದೆ ಎಂದು ಕರೆಕೊಟ್ಟುದಲ್ಲದೆ ಆದಕ್ಕಾಗಿ ಹೆಂಗಸರು ಶಿಸ್ತಾಗಿ ಸಿಂಗಾರ ಮಾಡಿಕೊಂಡು ಗಂಡಸರನ್ನು ಒಲಿಸಿಕೊಂಡು ಮನೆಯಲ್ಲಿ ಒಳ್ಳೆವರಾಗಿ ಇರುವಂತೆ ನಡೆದುಕೊಳ್ಳಬೇಕೆಂದು.

ಇಪ್ಪತ್ತೊಂದನೆಯ ಶತಮಾನದಲ್ಲೇ ವಿಹರಿಸುವ, ಸದಾ ಹೈಟೆಕ್ ಜಗತ್ತಿನ ಬಗ್ಗೆಯೇ ಯೋಚನೆ ಮಾಡುವ ಮುಖ್ಯಮಂತ್ರಿಗಳಿಗೆ ಹೆಣ್ಣಿನ ಬಗ್ಗೆ ಏಕೆ ಆಧುನಿಕವಾಗಿ ಚಿಂತಿಸಲು ಸಾಧ್ಯವಿಲ್ಲ? ಎಂದು ಆಚ್ಚರಿಯಾಗುತ್ತದೆ. ಅದಕ್ಕಿಂತ ಆಶ್ಚರ್ಯವೆಂದರೆ, ತಮ್ಮ ವೈಯಕ್ತಿಕ ಅಭಿಪ್ರಾಯಗಳನ್ನು ಸರ್ಕಾರದ ನೀತಿಯೆಂಬಂತೆ ಬಿಂಬಿಸುವ ಮುಖ್ಯಮಂತ್ರಿಗಳ ಧೋರಣೆ ಮಾತ್ರ ಬೇಜವಾಬ್ದಾರಿತನದಿಂದ ಕೂಡಿದ್ದಾಗಿದೆ. ತಮ್ಮ ಬೇಜವಾಬ್ದಾರಿಯನ್ನು ಮುಚ್ಚಿಹಾಕಲು ಮಧ್ಯ ಮತ್ತು ಜೂಜಿನಿಂದ ಬರುವ ಪಾಪದ ಹಣವನ್ನು ಶಾಲಾ ಮಕ್ಕಳ ಊಟಕ್ಕೆ, ಹೆಣ್ಣು ಮಕ್ಕಳ ವಿದ್ಯಾಭ್ಯಾಸಕ್ಕೆ ಮತ್ತು ಮುದುಕರ ಪಿಂಚಣಿಗೆ ಬಳಸಲಾಗುತ್ತದೆಯೆಂಬ ಸಮರ್ಥನೆ ಬೇರೆ!

ಮಹಿಳಾ ಸಚಿವರು, ರಾಜಕಾರಣಿಗಳು, ಜನಪ್ರತಿನಿಧಿಗಳೇ ತುಂಬಿದ್ದ ಈ ಸಭೆಯಲ್ಲಿ ಮಹಿಳೆಯರ ಘನತೆಗೆ ಕುಂದುಂಟಾಗುವ ಇಂತಹ ಮಾತುಗಳನ್ನು ಪ್ರತಿಭಟಿಸುವ ಧೈರ್ಯ ಯಾರೂ ತೋರಲಿಲ್ಲ. ಅಂತಹ ಈ ಸರಕಾರಿ ಕಾರ್ಯಕ್ರಮ ಭಾರತೀಯ ಹೆಣ್ಣಿನ ಬಗ್ಗೆ ಅಧಿಕಾರಸ್ಥ ಪುರುಷಲೋಕ ತಳೆದ ಸಂಕುಚಿತ ಮತ್ತು ಕೊಳಕು ಮುಖವನ್ನು ಪ್ರದರ್ಶಿಸಿತಷ್ಟೇ ಅಲ್ಲದೆ ಮಹಿಳಾ ಚಳುವಳಿ ಎದುರಿಸಬೇಕಾದ ಹಾದಿಯ ದುರ್ಗಮತೆಯನ್ನು ಪರಿಚಯಿಸಿತು. ಇಂದು ಮಹಿಳೆ ಹಲವಾರು ಸಾಮಾಜಿಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾಳೆ. ಒಂದಲ್ಲ ಒಂದು ರೀತಿಯಲ್ಲಿ ಈ ಸಮಸ್ಯೆಗಳಿಗೆ ಪುರುಷನ ದಬ್ಬಾಳಿಕೆಯ ಮೌಲ್ಯಗಳೇ ಕಾರಣವಾಗಿದೆ. ಆದರೆ ಈ ಅಂಶಗಳನ್ನು ಮನಸ್ಸಿನಲ್ಲಿ ಸ್ಪಷ್ಟವಾಗಿ ಮನನಮಾಡದೆ ತಮ್ಮನ್ನು ತಾವು ಶೃಂಗರಿಸಿಕೊಂಡು ಪುರುಷರನ್ನು ಒಲಿಸಿಕೊಂಡು ತಮ್ಮ ಸಮಸ್ಯೆಗೆ ಪರಿಹಾರ ಪಡೆಯುತ್ತೇವೆಂದು ಸ್ತ್ರೀಲೋಕ ಭ್ರಮಿಸಿದರೆ ಅದಕ್ಕಿಂತ ಮೂರ್ಖತನ ಬೇರೆಯಿಲ್ಲ. "ಮಹಿಳೆಯರು ಸಾಮಾಜಿಕವಾಗಿ ಉತ್ಪನ್ನಕಾರಕ ದುಡಿಮೆಯಲ್ಲಿ ಪಾಲ್ಗೊಂಡು ಗೃಹಕೃತ್ಯದ ದಾಸ್ಯತನದಿಂದ ವಿಮೋಚನೆ ಹೊಂದುವಂತಾಗಬೇಕು ಮತ್ತು ಮಹಿಳೆಯರು ಅಡುಗೆಯ, ತಾಯ್ತನದ ಮತ್ತು ದಾದಿಯ ಕೆಲಸದಲ್ಲೇ ಮರುಳಾಗಿ, ಅಪಮಾನಕ್ಕೆ ಗುರಿಯಾಗುವಂತಿದ್ದು ನಿರಂತರದಾಸ್ಯಕ್ಕೆ ಒಳಪಟ್ಟು ಶಾಶ್ವತ ಗುಲಾಮ ಚಾಕರಿಯಿಂದ ಮುಕ್ತರಾಗಬೇಕಾದದ್ದು ಅತ್ಯವಶ್ಯಕ" - ಲೆನಿನ್‌ರ ಈ ಮಾತುಗಳು ಮಹಿಳೆಯರಿಗೆ ದಾರಿ ದೀಪವಾಗಬೇಕು. ಸ್ವತಂತ್ರಳಾದ ಮಹಿಳೆ ಬೀದಿಗಿಳಿದು ಹೋರಾಟ ನಡೆಸಿದಾಗ ಮಾತ್ರ ಅವಳ ಸಮಸ್ಯೆಗಳಿಗೆ ಪರಿಹಾರ ದೊರೆತೀತು.

— ಎಸ್. ಗಾಯತ್ರಿ

# ದೇವಸ್ತ್ರೀಯರು

- ಡಾ॥ ಶೈಲಜಾ ಹಿರೇಮಠ

ಅನೇಕ ದೇವಸ್ತ್ರೀಯರು ವೈವಾಹಿಕ ಚೌಕಟ್ಟನ್ನು ವಿರೋಧಿಸುತ್ತಾರೆ. ತಮ್ಮ ಬದುಕಿನ ಕ್ರಮದ ಬಗ್ಗೆ ಹೆಮ್ಮೆಯಿಂದ ಹೇಳಿಕೊಳ್ಳುತ್ತಾರೆ. ಮರಿಯಮ್ಮನ ಹಳ್ಳಿಯಲ್ಲಿ ಬಸವ್ವ (ಹೆಸರು ಬದಲಾಯಿಸಿಕೊಂಡಿದೆ) ಹೇಳಿದ ಮಾತುಗಳು ಅವರ ಬದುಕಿನ ಮತ್ತೊಂದು ಬಹುಮುಖ್ಯ ಆಯಾಮವನ್ನು ತೆರೆದು ತೋರಿತು. ''ನಮ್ಮವ್ವಗ ನಾವು ಮೂರು ಮಂದಿ ಹೆಣ್ಣುಮಕ್ಕಳ ಇದ್ವಿ. ನಮ್ಮವ್ವ ಗಂಡುಳ್ಯಾಕಿ. ನಮ್ಮನ್ನ ಬಾಳ್ಸ ಪ್ರೀತಿಯಿಂದ ಬೆಳಸಿದ್ಲು. ಆಗಿನ ಕಾಲಕ್ಕ 'ಸಂಬ್ಳ ಸಾಲಿ' ಅಂತ ಇತ್ತು. ಅವ್ರು ಸರ್ಕಾರದ ಮಾಸ್ತರರಲ್ಲ. ನಾವು ತಿಂಗಳಗಿ ಒಂದಿಷ್ಟು ಫೀಜು ಕೊಡತಿದ್ವಿ. ಅದ್ಸ ಅವರಿಗೆ ಸಂಬಳ ಇದ್ದಂಗ. ತಿಂಗಳಗಿ ಒಂದು ರೂಪಾಯಿ, ಎರಡು ರೂಪಾಯಿ ಕೊಟ್ಟದ್ದು ನೆನಪು. ಗುಡಿಯಾಗ ಪಾಠಾ ಮಾಡತ್ತಿದ್ರು. ನಮ್ಮ ಕಾಲಕ್ಕ ಗುಡಿಗಳ್ಸ ಸಾಲಿಗಳಿದ್ದಂಗ. ನಮಗೆ ಗದುಗಿನ ಭಾರತ, ಜೈಮಿನಿ ಭಾರತ ಓದಲು ಬರುತ್ತಿತ್ತು. ಅವುಗಳಲ್ಲಿಯ ಅನೇಕ ಭಾಗಗಳನ್ನು ಕಂಠಪಾಠದಿಂದಲೇ ಹೇಳುತ್ತಿದ್ದೆವು. ಇದ ನಮ್ಮವ್ವಗ ಬಾಳ ಹಿಗ್ಗ ತರ್ತಿತ್ತು. ಆಗಿನ ಜನಾನೂ ನಾವು ಶಾಲಿಗಿ ಹೋಗೂದು. ಬರೂದು. ಪಾಠ ಹೇಳೂದು ಎಲ್ಲಾನೂ ಬಾಳ್ಸ ಬೆರಗಿನಿಂದ ನೋಡ್ತಿದ್ರು. 'ನನ್ನ ಮಕ್ಕಳ್ನ ಏಟ ಪ್ರೀತಿಯಿಂದ ಬೆಳಸಿನಿ. ಅಕ್ಷರ ಕಲಿಸೇನಿ ಅದಕ್ಕ ನಾ ಅವ್ರಿಗಿ ಮದ್ವಿ ಮಾಡ್ಹಾಂಗಿಲ್ಲ ತಗಿ' ಅಂತ ನಮ್ಮವ್ವ ಅಂತಿದ್ಲು. ಆಗಿನ ಕಾಲಕ್ಕ ಮದುವಿ ಮಾಡಿಕೊಂಡುರ ಪರಿಸ್ಥಿತಿನೂ ಹಂಗ್ಸ ಇತ್ತು. ನಮ್ಮ ಕಾಲಕ್ಕೆ ನಮ್ಮ ಕೆಳಜಾತಿ ಹೆಂಗಸರು ಮದ್ವಿಯಾಗಿದ್ರೂ ಬ್ಯಾರೆ ಗಂಡಸರ ಜೊತೆ ಓಡಿ ಹೋಗ್ತಿದ್ರು. ಓಡಿ ಹೋದ ಹೆಂಗಸರ್ನ ಹೊಡಮಳ್ಳಿ ಕರಕೊಂಡು ಬಂದು, ಅಂಥವರ ಜೊತಿ ಬಾಳ್ವೆ ಮಾಡ್ತಿದ್ರು. ಅಂಥಾ ಹೆಂಗಸರಿಗಿ ಗಾಲಿ ಹಾಕ್ತಿದ್ರು. ಎರಡು ಮುಂಗಾಲುಗಳಿಗೆ ದಪ್ಪನೆಯ ಗಾಲಿಗಳನ್ನು ಹಾಕಿರುತ್ತಿದ್ದರು. ಅವು ಎಷ್ಟು ಭಾರವಾಗಿರುತ್ತಿದ್ವು ಅಂದ್ರ ಒಂದ್ಹೆಜ್ಜಿ ಕಿತ್ತ ಇಡಬೇಕಿದ್ರ ಬಾಳ್ಸ ತ್ರಾಸ ಮಾಡಕೊತಿದ್ರು. ಆ ಗಾಲಿಗಳಿಗೆ ಕಬ್ಬಿಣದ ಸರಪಳಿ ಜೋಡಿಸಿರ್ತಿದ್ದರು. ಕಟ್ಟಿಗೆಯ ಭಾರದ ಜೊತೆಗೆ ಕಬ್ಬಿಣದ ಒಜ್ಜನೂ ಹೊರಬೇಕಾಗಿತ್ತು. ನಡಿಯುವಾಗ ಕಬ್ಬಿಣದ ಸರಪಳಿಯನ್ನು ಕೈಯಾಗ ಹಿಡಕೊಂಡ ತಿರಗಾಡಬೇಕಾಗಿತ್ತು. ಯಾವ ಹೆಣ್ಣಿಗಿ ಗಾಲಿ ಹಾಕಿರ್ತಿರೋ, ಅವಳು ಓಡಿ ಹೋಗಿ ಬಂದವಳೆಂದೇ ಅರ್ಥ. ಕೂಲಿ ನೆಚ್ಚಿಕೊಂಡು ಬದುಕು ಜೀವಗಳು ನಮ್ಮವು. ಗಾಲಿ ಹಾಕ್ಕೊಂಡ ಮನಿಯಾಗ ಕೂಡಾಗ ಆಗ್ತಿರಲಿಲ್ಲ. ಬಯಲು ಕಡಿಗೆ ಹೋಗಬೇಕಿದ್ರ, ಹೊಲದ ಕೆಲಸಕ್ಕೆ ಹೋಗಬೇಕಿದ್ರ ಆಕಿ ಬಯಲಿಗಿ ಬರಾಕ ಬೇಕಾಗ್ತಿತ್ತು. ಇವರನ್ನ ನೋಡಾಕ ಓಣಿಯವರೆಲ್ಲ ಬರ್ತಿದ್ರು. ಅವರು ತಗ್ಗಿಸಿದ ಚಂಡ (ತಲೆ) ಎತ್ತಿರಲಿಲ್ಲ. ಇನ್ನೊಮ್ಮಿ ಆಕಿ ಇಂಥಾ ತಪ್ಪನ್ನ ಮಾಡಬಾರ್ದು ಅಂತ ಶಿಕ್ಷಾ ಕೊಡ್ತಿದ್ರು. ಇಷ್ಟಾದ್ರೂ ಅವ್ರು ಮತ್ತ ಮತ್ತ ಓಡಿ ಹೋಗ್ತಿದ್ರು. ಗಂಡ ಅನಿಸಿಕೊಂಡವ್ರೂ ಅವ್ರಗೆ ಬಾಳ್ಸ ಹಿಂಸಿ ಕೊಡತಿದ್ರು. ಹೀಂಗಾಗಿ ಗಂಡನ್ನ ಬಿಟ್ಟು ಪ್ರೀತಿ ತೋರಿಸಿದವ್ನ ಹಿಂದ ಓಡಿ ಹೋಗ್ತಿದ್ರು, ಮ್ಯಾಲಿನ ಜಾತ್ಯಾಗ ಇಂಥಾವೆಲ್ಲ ಇರ್ಲಿಲ್ಲ. ಅವ್ರ ಹೆಣ್ಣು ಮಕ್ಳು ಹೊಸ್ತಿಲಿ ದಾಟಿದ್ದನಾ ನೋಡ್ಲಿಲ್ಲ. ನಮ್ಮಂದ್ಯಾಗ ಮಗಳಗಿ ಮದವಿ ಮಾಡೂದು ಅಂತಂದ್ರ, ಆಕಿನ್ನ ಹಗಲಿ ಬಾವಿಗಿ ನೂಕಿದ್ಹಂಗ ಅನ್ನು ಕಲ್ಪನಾ ಇತ್ತು. ಹಿಂಗಾಗಿ ನಮ್ಮವ್ವ ನಮಗ ಮದುವಿ ಮಾಡ್ಲಿಲ್ಲ. ಸುಖವಾಗಿ ಬೆಳೆದ ಮಗಳು ಸುಖವಾಗಿ ತೌರಲ್ಲಿ ಉಳಿಯಾಕ ಇದೊಂದ ದಾರಿ ಆಗಿತ್ತು'' ಎಂದು ಹೇಳುತ್ತ ಗತಕಾಲದ ಸಾಮಾಜಿಕ ಮೌಲ್ಯಗಳ ನೆನಪಿನಾಳಕ್ಕೆ ಇಳಿಯುತ್ತ ಹೋದಂತೆಲ್ಲಾ ಅವಳ ಮನಸ್ಸು ಕಹಿಗೊಂಡಂತೆ ತೋರಿತು. ಯಾಕೋ ಸುಮ್ಮನೆ ಮೌನವನ್ನು ಅಪ್ಪಿಕೊಂಡಳು ಮೇಲ್ವರ್ಗದ, ಮೇಲ್ಜಾತಿಯಲ್ಲಿ ಮಾತ್ರ ಹೆಣ್ಣಿನ ಶೀಲದ ಕುರಿತಂತೆ ಶಿಷ್ಟಾಚಾರಗಳು (?) ಕಂಡುಬರುವುದಿಲ್ಲ. ಈ ಸಮಸ್ಯೆ ಜಾತಿಯನ್ನು ಅವಲಂಬಿಸಿ ಬೆಳೆದು ಬಂದುದಲ್ಲ ಲಿಂಗವನ್ನನುಸರಿಸಿ ಬೆಳೆದು ಬಂದುದಾಗಿದೆ. ಇಂತಹ ಸ್ತ್ರೀ ಸಂಕಥನಗಳು ವ್ಯವಸ್ಥೆಯ ವಿರುದ್ಧ ಬಂಡೆದ್ದ ಯಶೋಗಾಥೆಯನ್ನು ಹೇಳುತ್ತವೆ. ಬಹುಪಾಲು ದೇವಸ್ತ್ರೀಯರು ಮದುವೆಯನ್ನು ಗೇಲಿ ಮಾಡುತ್ತಾರೆ. 'ಗಂಡ ಎನ್ನುವ ಸಾಂಸ್ಕೃತಿಕ ಪರಿಕಲ್ಪನೆಯೇ ಹೆಣ್ಣನ್ನು ನಿಯಂತ್ರಿಸುವುದು. ಆ ಮೂಲಕ ಎಲ್ಲ ಹಕ್ಕುಗಳನ್ನು ಅವಳ ಮೇಲೆ ಚಲಾಯಿಸುವುದಾಗಿದೆ. ಅವರ ಈ ಬಗೆಯ ನಿರ್ವಚನ ಅವರ ಆತ್ಮಶಕ್ತಿಯ, ವಿವೇಚನೆಯ ಸಾಮರ್ಥ್ಯವನ್ನು ಪ್ರತಿಬಿಂಬಿಸುತ್ತದೆ. ಅನೇಕ ದೇವಸ್ತ್ರೀಯರು ನಿಜವಾದ ಸ್ತ್ರೀವಾದಿಗಳಂತೆ ಕಂಡಿದ್ದಾರೆ. ಅಧೀನತೆಗೆ ಒಳಪಡುವ 'ತಾಳಿ'ಯನ್ನು ತಿರಸ್ಕರಿಸಿ ಮುತ್ತುಕಟ್ಟಿಸಿಕೊಳ್ಳುತ್ತಾರೆ. ಬೇಕಾದ ಗಂಡಸರನ್ನು ಕೂಡಿಕೊಳ್ಳುತ್ತಾರೆ. ಅದು ಅವರ ದೃಷ್ಟಿಯಲ್ಲಿ ತಪ್ಪಲ್ಲ. ಮಾತೃಮೂಲ ಸಂಸ್ಕೃತಿಯ ಅಸಲಿ ಧೋರಣೆ ಇದಾಗಿದೆ. ಗಂಡು ಹೆಣ್ಣಿನ ಸಮಾಗಮ ನಿಸರ್ಗ ಸಹಜವಾದುದು. ಅದಕ್ಕೆ ವೈವಾಹಿಕ ಚೌಕಟ್ಟ್ಯಾಕೆ ಎನ್ನುವುದು ಅವರ ಖಚಿತ ನಿಲುವು. ಸ್ತ್ರೀವಾದಿ ಅಧ್ಯಯನಕ್ಕೆ ಈ ತರಹದ ಸಂಗತಿಗಳು ಹೊಸ ಹೊಸ ಆಯಾಮುಗಳನ್ನು ಕಟ್ಟಿಕೊಡುತ್ತವೆ. ದೇವಸ್ತ್ರೀಯರ ಈ ನಿಲುವುಗಳನ್ನು ಕಂಡು ನಾವು ಸಂಭ್ರಮಿಸಬೇಕಾಗಿಲ್ಲ. ದೇವಸ್ತ್ರೀಯರು ನೆಚ್ಚಿಕೊಂಡ ಮೌಲ್ಯಗಳು ಯಥಾವತ್ತಾಗಿ ಸಮಾಜದಲ್ಲಿ ಚಾಲ್ತಿಯಲ್ಲಿಲ್ಲ. ಅವೆಲ್ಲ ಪುರುಷಶಾಹಿ ಸಂಸ್ಕೃತಿಯಲ್ಲಿ ವಿರೂಪಗೊಂಡ, ಅವಳು ಏನಿದ್ದರೂ ಗಂಡಿನ ಉಪಭೋಗದ ವಸ್ತುವಾಗಿ ನಿರ್ವಚಿಲ್ಪಟ್ಟಿದ್ದಾಳೆ.

ಮೇಳು-ಕೀಳು, ಮಡಿ-ಮೈಲಿಗೆಯ ದೇವಸ್ತ್ರೀಯರಲ್ಲೂ ಇದೆ. ಊರನಾಯಕ ದೇವಸ್ತ್ರೀಯರು ಮ್ಯಾಸಕನಾಯಕ ದೇವಸ್ತ್ರೀಯರಿಗಿಂತಲೂ ಶ್ರೇಷ್ಟವೆಂದು ಭಾವಿಸಿಕೊಳ್ಳುತ್ತಾರೆ. ತಳವಾರ ದೇವಸ್ತ್ರೀಯರು ಹರಿಜನ ದೇವಸ್ತ್ರೀಯರಿಗಿಂತಲೂ

ಉನ್ನತವೆಂದುಕೊಳ್ಳುತ್ತಾರೆ. ದೇವಸ್ತ್ರೀಯೊಳಗಿನ ಈ ತಾರತಮ್ಯಗಳು ನನ್ನನ್ನು ಒಂದು ಕ್ಷಣ ದಿಗ್ಭ್ರಾಂತಳನ್ನಾಗಿಸಿದವು. ನ್ಯಾಸನಾಯಕರು, ಊರನಾಯಕರು ಹಾಗೂ ಗಂಗಮತದವರು ಲಿಂಗಾಯತ ಮತ್ತು ಬ್ರಾಹ್ಮಣವರನ್ನು ಹೊರತುಪಡಿಸಿದಂತೆ ಬೇರಾದೊಂದಿಗೂ ಲೈಂಗಿಕ ಸಂಬಂಧವನ್ನಿಟ್ಟು ಕೊಳ್ಳುವುದಿಲ್ಲ. ನಾಯಕರು ನಮ್ಮ ಜನಾಂಗದವರೊಂದಿಗೆ, ಮೇಲ್ಜಾತಿಯವರೊಂದಿಗೆ ದೇಹಸಂಪರ್ಕವಿಟ್ಟು ಕೊಟ್ಟುತ್ತಾರೆ. ಹರಿಜನ ದೇವಸ್ತ್ರೀಯರು ಹಾಗೂ ತಳವಾರ ದೇವಸ್ತ್ರೀಯರೊಂದಿಗೆ ಮೇಲ್ಜಾತಿಯ ಪುರುಷರ ಲೈಂಗಿಕ ಸಂಬಂಧವಿರುವ ಉದಾಹರಣೆಗಳು ಬಹಳ ವಿರಳ. ಅಂತ್ಯಜರಾದ ಈ ಮಹಿಳೆಯರತ್ತ ಅವರಾರೂ ಬರುವುದಿಲ್ಲ. ದೇವಸ್ತ್ರೀಯರಲ್ಲಿಯ ಶ್ರೇಷ್ಠ - ಕನಿಷ್ಠತೆಗೆ ಅವರು ಇಟ್ಟುಕೊಂಡಿರುವ ಗಂಡಸರ ಜಾತಿ ಸಂಬಂಧಗಳೇ ಕಾರಣ. ಮೇಲ್ವರ್ಗದವನು, ಮೇಲ್ಜಾತಿಯವನು ತನ್ನನ್ನು ಮೆಚ್ಚಾತ್ತಾನೆನ್ನುವುದೇ, ಅವಳ ಪಾಲಿನ ಭಾಗ್ಯವಾಗಿ ಪರಿಣಮಿಸಿದೆ. ಅವರು ಯಾವ ದೇವಸ್ತ್ರೀಯರತ್ತ ಹೋಗುವುದಿಲ್ಲವೋ ಅಂಥವರು ಕನಿಷ್ಠ ಎಂದು ಕೊಳ್ಳುತ್ತಾರೆ. ತಮ್ಮ ಜಾತಿ ಇಲ್ಲವೆ ತಮಗಿಂತ ಶ್ರೇಷ್ಠ ಜಾತಿ ಎನ್ನಿಸಿಕೊಂಡವರೊಂದಿಗೆ ಸಂಬಂಧವಿಟ್ಟುಕೊಳ್ಳಲು ಇಷ್ಟಪಡುತ್ತಾರೆ ವಿನಹ ತಮಗಿಂತ ಕೆಳಜಾತಿಯವರೊಂದಿಗಲ್ಲ. ಮೇಲ್ವರ್ಗದ, ಮೇಲ್ಜಾತಿಯ ಪುರುಷರು ಮುಟ್ಟುವ ಮೂಲಕವೇ ಧನ್ಯತಾಭಾವವನ್ನು ಹೊಂದುವ ಈ ಮಹಿಳೆಯಳು ತಮಗಿಂತ ಕೆಳಗಿನ ಜಾತಿಯವರೊಂದಿಗೆ ಎಷ್ಟರಮಟ್ಟಿಗೆ ಮಡಿ-ಮೈಲಿಗೆಯನ್ನು ಕಾಪಾಡಿಕೊಳ್ಳುತ್ತಾರೆಂದರೆ, ಅವರ ಮನೆಗೆ ಅತಿಥಿಯಾಗಿ ಹೋಗುವುದಿಲ್ಲ. ಅವರ ಮನೆಯಲ್ಲಿಯ ನೀರನ್ನೂ ಸಹ ಮುಟ್ಟುವುದಿಲ್ಲ. ಪ್ರಧಾನ ಧಾರೆಯಲ್ಲಿ ಬರುವ ಪುರುಷರು ಜಾತಿ ಪಾಲಿಟಿಕ್ಸ್ ಮೂಲಕವೇ ತಮ್ಮ ಲೈಂಗಿಕ ಸ್ವೇಚ್ಛಾಚಾರವನ್ನು ಪೂರೈಸಿಕೊಳ್ಳುತ್ತಾರೆ. ಈ ರಾಜಕೀಯದ ಮೂಲಕವೇ ತಾವು ಕಟ್ಟಿಕೊಟ್ಟ ಜಾತಿ ಪರಿಕಲ್ಪನೆ ಸಮಾಜದಲ್ಲಿ ಕ್ರಿಯಾತ್ಮಕವಾಗಿರುವಂತೆ ನೋಡಿಕೊಳ್ಳುತ್ತಾರೆ. ತಮ್ಮತಮ್ಮಲ್ಲಿಯೇ ಮೇಲಿ-ಕೀಳು ಎಂದು ಕಚ್ಚಾಡುವ ಲೈಂಗಿಕದಾಸಿಯರು ಸಂಘಟನೆಗೊಂಡು ಪ್ರಧಾನಧಾರೆಯ ವಿರುದ್ಧ ಬಂಡೇಳುವುದಾದರೂ ಹೇಗೆ? ಮೇಲ್ವರ್ಗದ, ಮೇಲ್ಜಾತಿಯ ಪುರುಷರ ಆಶೋತ್ತರಕ್ಕೆ ಪೂರಕವಾಗಿಯೇ ದೇವಸ್ತ್ರೀಯರ ವರ್ತನೆಗಳು ಪ್ರಕಟಗೊಳ್ಳುತ್ತವೆ. ಅದು ಅವರ ತಪ್ಪಲ್ಲ, ಶತಮಾನಗಳಿಂದಲೂ ಇಂತಹ ನಂಬಿಕೆಯನ್ನು ಅವರಲ್ಲಿ ದೃಢಗೊಳಿಸಿ ಶಾಶ್ವತವಾಗಿ, ಬಹಿರಂಗವಾಗಿ ದೈಹಿಕ ಸುಲಿಗೆಯನ್ನು ನಡೆಸಿದ್ದಾರೆ. ಭಾರತದ ಬಹುಪಾಲು ಮಹಿಳೆಯರು ತಮ್ಮ ಮೇಲಿನ ಇಂತಹ ದಬ್ಬಾಳಿಕೆಯನ್ನು ಶೋಷಣೆಯೆಂದು ಅರ್ಥಮಾಡಿಕೊಳ್ಳುವುದಿಲ್ಲ. ಬದಲಾಗಿ ಅದು ತಮ್ಮ ಪೂರ್ವಜನ್ಮದ ಸುಕೃತವೆಂದು ಭಾವಿಸುತ್ತಾರೆ. ಹೀಗೆ ನಂಬಿಸಲು ಎಷ್ಟೆಷ್ಟು ಬಗೆಯ ದಾರಿಗಳಿವೆಯೋ ಅಷ್ಟೆಲ್ಲ ರೀತಿಯ ಹಾದಿಗಳನ್ನು ಧರ್ಮಬದ್ಧಗೊಳಿಸಲಾಗಿದೆ. ಕಾನೂನುಬದ್ಧಗೊಳಿಸಲಾಗಿದೆ.

ಮನುಷ್ಯರ ಪ್ರತಿಕ್ರಿಯೆಗಳು ಎರಡು ಹಂತಗಳಲ್ಲಿ ಪ್ರಕಟಗೊಳ್ಳುತ್ತವೆ. 1. ಸಹಜ ಸ್ಥಿತಿ 2. ಅಸಹಜ ಸ್ಥಿತಿ. ಸಮಾಜ ಹಾಕಿಕೊಟ್ಟ ಮೌಲ್ಯಗಳ ಹಳ್ಳಿಯಲ್ಲಿಯೇ ನಡೆಯುವರನ್ನು 'ಸಹಜ ಸ್ಥಿತಿ' ಎಂದು ಹೇಳಲಾಗದಿದ್ದರೂ, ಅಂಥಹದನ್ನೇ ಸಹಜ ಸ್ಥಿತಿ ಎಂದು ಸಮಾಜ ನಿರ್ವಚಿಸಿದೆ. ಸಿಟ್ಟು, ಕೋಪ, ಅಸಹಾಯಕತೆಯಲ್ಲಿದ್ದಾಗ ಮನುಷ್ಯರು ಸಹಜವಾಗಿ ವರ್ತಿಸುತ್ತಾರೆಯಾದರೂ, ಇಂತಹ ವರ್ತನೆಗಳನ್ನು ಅಸಹಜಸ್ಥಿತಿ ಎಂದು ಗುರುತಿಸಿದೆ. ಸಮಾಜ ನಿರ್ವಚಿಸಿದ ಈ ಅರ್ಥಗಳನ್ನಿಟ್ಟುಕೊಂಡೇ ಜೋಗತಿಯರು ಬಳಸಿದ ಬೈಗುಳಗಳನ್ನು ವಿಶ್ಲೇಷಿಸಿದರೆ, ನಮಗೆ ಬೇರೆ-ಬೇರೆ ಹೊಳಹುಗಳು ದೊರೆಯಬಹುದು. ನಾನು ಸಂದರ್ಶಿಸಿದ ಜೋಗತಿಯರೆಲ್ಲರೂ ಪುರುಷನಿಷ್ಠ ಸಮಾಜದ ಕುರಿತು ಸಿಟ್ಟನ್ನು, ಅಸಹಾಯಕತೆಯನ್ನು ಪುರುಷನಿಷ್ಠ ಭಾಷೆಯಲ್ಲಿಯೇ ವ್ಯಕ್ತಪಡಿಸಿದವರು. ಇಲ್ಲಿ ನಾನು ಬಸವಿ ಸಮಾಜವನ್ನು ಬೇಕಾಗಿಯೇ ಕೈಬಿಟ್ಟಿದ್ದೇನೆ. ವೈದಿಕ ಮೂಲದಿಂದ ಹುಟ್ಟಿಕೊಂಡ ಅದನ್ನು ಮಾತೃಮೂಲ ಪರಂಪರೆಗೆ ಸೇರಿದ ಜೋಗತಿಯರ ಭಾಷೆಯೊಂದಿಗೆ ಹೋಲಿಸುವುದಾಗಲಿ ತುಲನೆ ಮಾಡುವುದಾಗಲಿ ಉಚಿತವೆನಿಸುವುದಿಲ್ಲ. ಸೂಳೆಮಕ್ಕಳು, ಮಿಂಡರಿಗುಟ್ಟಿದವರು ಎಂದು ಗಂಡಸರ ಮೇಲೆ ತಮ್ಮ ಸಿಟ್ಟನ್ನು ಕಾರಿಕೊಳ್ಳುತ್ತಿದ್ದರು. ಸಹಜಸ್ಥಿತಿಯಲ್ಲಿ ಪ್ರಕಟಗೊಳ್ಳುವ ವರ್ತನೆಗಳೆಲ್ಲ ಸಂಸ್ಕೃತೀಕರಣಕ್ಕೆ ಒಳಗಾದವುಗಳು, ನಾನು ಮಾತನಾಡುತ್ತಿರುವುದು ಶಂಬಾಜೋಶಿಯವರು ಪ್ರತಿಪಾದಿಸಿದ ಸಂಸ್ಕೃತೀಕರಣವನ್ನಲ್ಲ. ನಿರ್ದಿಷ್ಟ ಸಮಾಜದೊಳಗೆ ಜೀವಿಸುತ್ತಿರುವವರು, ಆ ಸಮಾಜ ರೂಪಿಸಿದ ನೀತಿ-ನಿಯಾಮಾವಳಿಗಳಲ್ಲಿ ಬದುಕುತ್ತಿರುತ್ತಾರೆ. ಅವು ಒಂದರ್ಥದಲ್ಲಿ ಕಲಿಕೆಯ ಸ್ವರೂಪದಲ್ಲಿರುತ್ತವೆ. ಆದರೂ ಅದನ್ನು ಸಹಜ ಸ್ಥಿತಿಯೆಂದೇ ಸಮಾಜ ಗುರುತಿಸಿದೆ. ತಮ್ಮ ಮೇಲೆ ಏನಾದರೂ ಸಾಮಾಜಿಕ ಹಾಗೂ ಕೌಟುಂಬಿಕ ಅನ್ಯಾಯಗಳಾದಾಗ ಮನುಷ್ಯರು ಅಸಹಜಸ್ಥಿತಿಯಲ್ಲಿ ತಮ್ಮ ಮೂಲಸ್ವರೂಪವನ್ನು ತೋರಿಸುತ್ತಾರೆ. ಅಲ್ಲಿ ಯಾವುದೇ ರೀತಿಯ ಸಾಮಾಜಿಕ ಮೌಲ್ಯಗಳ ಒತ್ತಡವಿರುವುದಿಲ್ಲ. ವ್ಯಕ್ತಿಗಳ ಸಿಟ್ಟು, ಆಕ್ರೋಶ ಅವರವರ ಸ್ವಂತಿಕೆಯಲ್ಲಿಯೇ ಪ್ರಕಟಗೊಳ್ಳಬೇಕು. ಜೋಗತಿಯರು ಬೈಗುಳಗಳಲ್ಲಿಯಾದರೂ ತಮ್ಮ ಚಹರೆಯನ್ನು ಉಳಿಸಿಕೊಂಡಿದ್ದಾರೇನೂ ಎನ್ನುವುದು ನನ್ನ ಸಹಜ ಕುತೂಹಲವಾಗಿತ್ತು. ಹೀಗಾಗಿ ಅವುಗಳಿಗೆ ವಿಶೇಷ ಒತ್ತುಕೊಟ್ಟು ನೋಡಿದೆ. ಯಾವ ವ್ಯವಸ್ಥೆಯಿಂದ ಅವರಿಗೆ ಅನ್ಯಾಯವಾಗಿದೆಯೋ, ಅವರ ವಿರುದ್ಧ ಆಕ್ರೋಶಕಾರಲು ಅವರದೇ ಆದ ಬೈಗುಳಗಳಿಲ್ಲ. ಪುರುಷರು ಕಟ್ಟಿಕೊಟ್ಟ ಬೈಗುಳಗಳನ್ನೇ ಅವಲಂಬಿಸಿದ್ದಾರೆ. ಪುರುಷಪ್ರಧಾನ ವ್ಯವಸ್ಥೆಗೆ ಅದೆಷ್ಟರಮಟ್ಟಿಗೆ ಹೊಂದಿಕೊಂಡಿದ್ದಾರೆಂದರೆ ಮತ್ತು ಅದನ್ನು ಸಮಾಜ ಹೇಗೆ ಅನಿವಾರ್ಯವಾಗಿಸಿದೆಯೆಂದರೆ, ಅವರು ಬಳಸಿದ

ಬೈಗುಳು ಅವರಿಗೇ ತಿರುಗುತ್ತವೆ ಎಂಬುದು ಅವರಿಗರ್ಥವಾಗುವುದಿಲ್ಲ.

ಸವದತ್ತಿ, ಚಿಂಚಲಿ, ಕೊಕಟನೂರು ಮೊದಲಾದ ಪ್ರದೇಶಗಳಲ್ಲಿಯ ದೇವಸ್ತ್ರೀಯರು ಸಾಂಗ್ಲಿ, ಪುಣೆ, ಬಾಂಬೆಗೆ ದೇಹಮಾರಿ ದುಡ್ಡುಗಳಿಸಲು ಹೋಗುತ್ತಾರೆ. ಅಥಣಿಯಲ್ಲಿ ನಾನು ಸಂದರ್ಶಿಸಿದ ದೇವಸ್ತ್ರೀಯೊಬ್ಬಳು ಮರಾಠಿ, ಹಿಂದಿ ಶಬ್ದಗಳನ್ನು ಹೆಚ್ಚಾಗಿ ಬಳಸುತ್ತಿದ್ದಳು. ವಿಮೋಚನಾ ಕೇಂದ್ರದವರು ಕೊಟ್ಟ ಸಣ್ಣ ಸೂಚನೆ ನೆನಪಾಯಿತು. ಸ್ಥಳೀಯರಾಗಿಯೇ ಉಳಿದ ದೇವಸ್ತ್ರೀಯರಿಗೆ ಹಿಂದಿ, ಮರಾಠಿ ಬರುವುದಿಲ್ಲ. ಹಿಂದಿ, ಮರಾಠಿ ಶಬ್ದಗಳನ್ನು ಬಳಸಿದರೆ ಖಂಡಿತವಾಗಿಯೂ ಅವರೂ ಬಾಂಬೆಗೆ ಹೋಗಿಬಂದವರಾಗಿರುತ್ತಾರೆ. ಅವರ ಈ ಮಾತು ನೆನಪಿಗೆ ಬಂದು ತಟ್ಟನೆ ಪ್ರಶ್ನಿಸಿದೆನು. ಮೊದಮೊದಲು ತಿರಸ್ಕರಿಸಿದ ಅವಳು ನಂತರ ಒಪ್ಪಿಕೊಂಡಳು. 'ಈಗಾಗಲೇ ನಮ್ಮ ಹಳ್ಳಿಯಿಂದ ಮುತ್ತುಕಟ್ಟಿಸಿಕೊಂಡು ಹೋದವರು ಅಲ್ಲಿರುತ್ತಾರೆ. ಅವರೇ ನಮ್ಮನ್ನು ದೊಡ್ಡವರಾಗುವ ಪೂರ್ವದಲ್ಲಿಯೆ ಗುತ್ತಿಗೆ ಹಿಡಿದಿರುತ್ತಾರೆ. ದೊಡ್ಡವರಾದ ತಕ್ಷಣ ಬಾಂಬೆಗೋ, ಸಾಂಗ್ಲಿಗೋ ಕರೆದುಕೊಂಡು ಹೋಗುತ್ತಾರೆ. ಹೋಗುವ ಪೂರ್ವದಲ್ಲಿ ನಮ್ಮನೆಯ ಹಿರಿಯರಿಗೆ ಒಂದು ಸಾವಿರದಿಂದ ಐದು ಸಾವಿರದವರೆಗೆ ದುಡ್ಡು ಕೊಡುತ್ತಾರೆ. ಅದು ಆ ಹುಡುಗಿಯ ರೂಪದ ಮೇಲೆ ಅವಲಂಬಿಸಿರುತ್ತದೆ. ಸುಂದರವಾಗಿರುವ ಹುಡುಗಿಯರಿಗೆ ಮುತ್ತು ಕಟ್ಟಿಸಲು ಇವರೆ ಪ್ರೇರೇಪಿಸುತ್ತಾರೆ. ಬಡತನದ ಕಾರಣದಿಂದಾಗಿ ಅವರ ತಂದೆ-ತಾಯಿಗಳೂ ಅದನ್ನು ಒಪ್ಪುತ್ತಾರೆ. ನನ್ನನ್ನು ಸಾಂಗ್ಲಿಗೆ ಕಳುಹಿಸಿದರು. ಗಿರಾಕಿಗಳನ್ನು ಹುಡುಕಿಕೊಡುವುದು, ವ್ಯವಹಾರವನ್ನು ಹೊಂದಿಸುವುದು ಮಧ್ಯವರ್ತಿಯಾಗಿರುವುದೇ ಆಗಿರುತ್ತದೆ. ಹುಡುಗಿ ಸ್ವಲ್ಪ ಚಾಲಾಕು ಇದ್ದರೆ ಅವಳೇ ಘರವಾಲಿಯಾಗುತ್ತಾಳೆ. ರಾತ್ರಿ ಈ ಕೆಲಸವಾದರೆ, ಹಗಲಿ ಗಾರೆ ಕೆಲಸಕ್ಕೆ ಹೋಗುತ್ತಿದ್ದೆ. ಏನೋ ರೋಗ ಹತ್ತಿ ಕೈಯಲ್ಲಿಂದ ಐದು ಸಾವಿರ ಖರ್ಚುಮಾಡಿಕೊಂಡು ಜೀವನ ಉಳಿಸಿಕೊಂಡು ಈ ಮರ್ಯಾದೆಯಿಂದ ಬದುಕುತ್ತಿದ್ದೇನೆ'' ಎಂದಳು. ಮುಖದಲ್ಲಿ ಆವರಿಸಿದ ವಿಷಾದದ ಛಾಯೆಯನ್ನು ಮರೆಸಲು ಸುಮ್ಮನೆ ನಕ್ಕಳು. ಸಾಂಗ್ಲಿ, ಪುಣಾ, ಬಾಂಬೆ ಮೊದಲಾದವುಗಳು ವ್ಯಾಪಾರ ಪ್ರಧಾನವಾದ, ಕೈಗಾರಿಕಾ ಪ್ರಧಾನವಾದ ಪ್ರದೇಶಗಳಾಗಿವೆ. ಇವು ಸಂಪೂರ್ಣ ಜಾಗತೀಕರಣಕ್ಕೆ ಪಕ್ಕಾಗಿವೆ. ಜಾಗತೀಕರಣ ಇಡೀ ಭಾರತವನ್ನು ವ್ಯಾಪಿಸಿಕೊಳ್ಳುತ್ತಿದೆ. ಭೂಮಿ, ಕಲ್ಲು, ಮಣ್ಣು ಹೀಗೆ ಪ್ರತಿಯೊಂದನ್ನು ಮಾರುಕಟ್ಟೆಗೆ ಇಟ್ಟು ಲಾಭ ಪಡೆದುಕೊಳ್ಳುವ ಪ್ರಕ್ರಿಯೆ ಇಂದು ಎಲ್ಲೆಡೆಗೆ ಕಂಡುಬರುತ್ತಿದೆ. ಇವತ್ತಿನ ಸಂದರ್ಭದಲ್ಲಿ ಇವೆಲ್ಲವುಗಳ ಜೊತೆಯಲ್ಲಿ ಹೆಣ್ಣಿನ ದೇಹವೂ ಸೇರಿಹೋಗಿದೆ. ಇಂತಹ ಪರಿಸ್ಥಿತಿ ಹಿಂದೆ ಇರಲಿಲ್ಲವೆಂತಲ್ಲ. ಹಿಂದೆಂದಿಗಿಂತ ಇಂದು ಹೆಚ್ಚು ಢಾಳಾಗಿ ಕಂಡುಬರುತ್ತಿದೆ. ಉತ್ತರಕರ್ನಾಟಕದಲ್ಲಿಯ ಬಹುಪಾಲು ಬಸವಿಯರು, ಜೋಗತಿಯರು ಗೋವೆಯಲ್ಲಿ, ಮಹಾರಾಷ್ಟ್ರದ ಭಾಗಗಳಿಗೆ ರಫ್ತಾಗುತ್ತಿದ್ದಾರೆ.

ಸರ್ಕಾರ ಇವರಿಗೆ ಕಲ್ಪಿಸಿಕೊಡುವ ಯೋಜನೆಗಳು, ಸಹಾಯಗಳು, ಜಾಗತೀಕರಣ ಸಂದರ್ಭದಲ್ಲಿ ಚಲಾವಣೆಯಲ್ಲಿಲ್ಲದ ನಾಣ್ಯದಂತಾಗಿವೆ. ದೇವಸ್ತ್ರೀಯರು ಹೊಸ ರೀತಿಯ ಆರ್ಥಿಕ ಅವಿಷ್ಕಾರಗಳಿಗೆ ಹೊಂದಿಕೊಳ್ಳಲಾಗದೆ ಮೂಲ ಸ್ಥಿತಿಯಲ್ಲಿಯೇ ಉಳಿದಿದ್ದಾರೆ. ಇಂದಿನ ಬಂಡವಾಳನಿಷ್ಠ ಮಾರುಕಟ್ಟೆ ದೇವಸ್ತ್ರೀಯರ ಬದುಕಿನ ಮೇಲೆ ಪರಿಣಾಮ ಬೀರಿದೆ. ಬಡತನದ ಕೆಳರೇಖೆಯಲ್ಲಿರುವ ಇವರಿಗೆ ಇವತ್ತಿನ ಉದಾರೀಕರಣದ ಲಾಭ ಕನಸಿನಲ್ಲಿಯೂ ತಟ್ಟುವುದಿಲ್ಲ. ವ್ಯಕ್ತಿಕೇಂದ್ರಿತವಾಗಿ ಬೆಳೆಯುವ ಜಾಗತೀಕರಣ ಸಮಷ್ಟಿ ಅಭಿವೃದ್ಧಿ ಪರಿಕಲ್ಪನೆಯನ್ನು ಸಾರಾಸಗಟಾಗಿ ಜಾಣತನದಿಂದ ಕಂಡೂಕಾಣದಂತೆ ತಳ್ಳಿ ಹಾಕುತ್ತಿದೆ. ಸಮುದಾಯದ ಪರಿಕಲ್ಪನೆಯನ್ನು ಛಿದ್ರಗೊಳಿಸುತ್ತವೆ. ಈಗ ತಾನೆ ಎಚ್ಚೆತ್ತು ಸಂಘಟನೆಗೊಳ್ಳುತ್ತಿರುವ ಮಹಿಳಾ ಸಮುದಾಯಗಳು ಮತ್ತೆ ತಮ್ಮ ತಮ್ಮ ಮೂಲ ನೆಲೆಗಳಿಗೆ ಚದುರಿ ಹೋಗುವ ಅಪಾಯವಿದೆ. ಇದು ಮಹಿಳಾ ಸಂಘಟನೆಗಳಿಗೆ ಮಾತ್ರ ಅನ್ವಯಿಸುವುದಿಲ್ಲ. ಅದು ದಲಿತ, ರೈತ, ಕಾರ್ಮಿಕ ಸಂಘನೆಗಳಿಗೂ ವಿಸ್ತರಿಸುತ್ತದೆ.

(ಕಳೆದ ಸಂಚಿಕೆಯಿಂದ ಮುಂದುವರೆದ ದೇವಸ್ತ್ರೀಯರು ಲೇಖನ ಇಲ್ಲಿಗೆ ಮುಕ್ತಾಯಗೊಂಡಿತು.)

ಮಹಿಳಾ ಅಧ್ಯಯನ ಪತ್ರಿಕೆಯಲ್ಲಿ (ಸಂಪುಟ 3, ಸಂಚಿಕೆ 1, ಜನವರಿ 2001) ಬಸವಿಯರು ಎನ್ನುವ ಲೇಖನವು ಪ್ರಕಟಗೊಂಡಿತು. ಅದರಲ್ಲಿ ನಾನು ಎಲ್ಲರಂತೆ ಜೋಗತಿ ಮತ್ತು ಬಸವಿಯರನ್ನು 'ಬಸವಿ' ಎಂದೇ ಗುರುತಿಸಿರುವೆ. ಕ್ಷೇತ್ರಕಾರ್ಯ ವ್ಯಾಪಕವಾದಂತೆ, ಅಧ್ಯಯನ ಆಳವಾದಂತೆ, ನನ್ನ ತಪ್ಪಿನ, ಅರಿವಾಯಿತು. ಮುದ್ರೆ ಹಾಕಿಸಿಕೊಳ್ಳುವ 'ಬಸವಿ' ಸಂಪ್ರದಾಯವೇ ಬೇರೆ, ಮತ್ತು ಕಟ್ಟಿಸಿಕೊಳ್ಳುವ ಜೋಗತಿಯರ ಪರಂಪರೆಯೇ ಬೇರೆ. ಈ ಎರಡು ಭಿನ್ನ ಸಂಪ್ರದಾಯಗಳನ್ನು 'ಬಸವಿಯರು' ಎಂದು ಗುರುತಿಸುವುದು ಸರಿಯಾದ ಕ್ರಮವಲ್ಲವೆಂದು ನಂತರದಲ್ಲಿ ಅನಿಸಿತು. ಬಸವಿಯರು, ಜೋಗತಿಯರು ಈ ಪದಗಳೇ ಭಿನ್ನ ಭಿನ್ನ ಸಂಪ್ರದಾಯಗಳ ಕವಲುಗಳನ್ನು ಧ್ವನಿಸುತ್ತದೆ. ಅದಕ್ಕಾಗಿ ಇಬ್ಬರನ್ನು ಒಟ್ಟಿಗೆ ಸೇರಿಸಿ ಹೇಳುವ ಪದಕ್ಕಾಗಿ ಕಾಡಿದೆ. ದೇವರಿಗೆ ಅರ್ಪಿಸುವ ಇವರನ್ನು 'ದೇವ ಸೂಳೆಯರು' ಎಂದು ಕರೆದರಾಯಿತು ಎಂದುಕೊಂಡಿದ್ದೆ. ಆದರೆ ಸಾಮಾಜಿಕ ಅಪಮಾನವನ್ನು ಹೊತ್ತ ಸೂಳೆಯರು ಎನ್ನುವ ಪದ ಪ್ರಯೋಗಕ್ಕೆ ಮನಸ್ಸು ಒಪ್ಪಲಿಲ್ಲ. ದೇವರ ಲೈಂಗಿಕ ಸ್ತ್ರೀಯರು. ಅಷ್ಟು ಸರಿಯಾದ ಪದ ಎನಿಸಲಿಲ್ಲ. ಆದ್ದರಿಂದ 'ದೇವಸ್ತ್ರೀಯರು' ಎನ್ನುವ ಪದ ಇಲ್ಲಿ ಬಳಸಿರುವೆ

# 'ಯಾನ ಸಂಸ್ಕೃತಿ' - ಒಂದು ಪರಿಚಯ




ಯಾನ ಸಂಸ್ಕೃತಿ (ಸಿಂಗಾಪುರ ಮಲೇಷಿಯಾ ಪ್ರವಾಸ)

ಲೇಖಕಿ : ಶಾಂತಾ ನಾಗರಾಜ್

ಪ್ರಕಾಶಕರು : ಆತ್ರೇಯ ಪ್ರಕಾಶನ, 4161,
9ನೇ ಮೇನ್, ಸುಬ್ರಹ್ಮಣ್ಯ ನಗರ,
ಬೆಂಗಳೂರು - 560 021

ವರ್ಷ : 2002, ಬೆಲೆ ರೂ. 100/-

- ಡಾ|| ಗೀತಾ ಪಿ.ಎಸ್.

''ದೇಶ ಸುತ್ತು - ಕೋಶ ಓದು'' ಎಂಬುದು ನಮ್ಮ ಹಳೆಯ ನಾಣ್ಣುಡಿಯಾದರೂ, ಈ ಹೊಸಕಾಲದಲ್ಲೂ ಇದರ ಅರ್ಥವಂತಿಕೆಯೇನು ಕಡಿಮೆಯಾಗಿಲ್ಲ. ವ್ಯಕ್ತಿ , ಕೋಶದ ಓದಿನಂದಷ್ಟೇ ಅಲ್ಲ, ದೇಶಸುತ್ತುವ ಮೂಲಕವೂ ಜಾಣನಾಗಬಹುದಾದ ಸಾಧ್ಯತೆ ಖಂಡಿತ ಇದೆ. ಆದರೆ ಈ 'ದೇಶ ಸುತ್ತುವ' ಪ್ರಕ್ರಿಯೆಯ ಹಿಂದೆ ಒಂದು ಸಂವೇದನಾ ಶೀಲವೂ ಪರಿಣತವೂ ಆದ ಪ್ರಜ್ಞೆಬೇಕು, ಇಲ್ಲದಿದ್ದರೆ ಯಾವ ದೇಶ - ದೇಶಾಂತರಕ್ಕೆ ಹೋದರೂ 'ಹೋದ ಪುಟ್ಟ ಬಂದ ಪುಟ್ಟ' ಎಂದಂತಾಗುತ್ತದೆ. ಹಾಗಾಗದೆ ದೇಶ ಸುತ್ತುವ ಉದ್ಯಮ ಆನಂದವನ್ನೂ, ಅರಿವನ್ನೂ ಏಕಕಾಲದಲ್ಲಿ ನೀಡಿ ನಮ್ಮನ್ನು 'ಹಿಗ್ಗಿಸಬೇಕು'.

ಇಂದು ಹೊರ ದೇಶಗಳಿಗೆ ಹೋಗುವುದೇನೂ ದೊಡ್ಡ ಸಂಗತಿಯಾಗಿ ಉಳಿದಿಲ್ಲ, ಅಮೇರಿಕಾ - ಇಂಡಿಯಾಗಳಂತೂ 'ಅಡುಗೆಮನೆ - ಬಚ್ಚಲು ಮನೆ'ಗಳಂತಾಗಿವೆ. ಆ ಕುರಿತು ಬರುವ ಪ್ರವಾಸ ಕಥನಗಳೂ ಕಡಿಮೆಯಲ್ಲ. 'ಆ ದಿನ ಅಲ್ಲಿ ಹೋಗಿದ್ದೆ ಈ ದಿನ ಇಲ್ಲಿ ಹೋಗಿದ್ದೆ , ಗೆಳತಿಯ ಮಗನ ಮನೆಯಲ್ಲಿ ಸೊಗಸಾದ ಅವರೆಕಾಳು ಸಾರು ತಿಂದೆ', ಎಂಬಂತಹ ಕಥನಗಳಿಂದ ಹಿಡಿದು ತುಂಬ ಗಂಭೀರವಾದ ಅನುಭವದ ಹಲವು ವಿಭಿನ್ನ ನೆಲೆಗಳ ಪ್ರವಾಸ ಕಥನಗಳು ರಾಶಿರಾಶಿಯಾಗಿ ಸೃಷ್ಟಿಯಾಗುತ್ತಿವೆ. ಇಂಥ ಕೃತಿರಾಶಿಯಲ್ಲೊಂದು ಕಣ್ಸೆಳೆಯುವ ಕಥನ ಶ್ರೀಮತಿ ಶಾಂತಾನಾಗರಾಜ್ ಅವರ ಸಿಂಗಪುರ - ಮಲೇಷಿಯಾಗಳ ಪ್ರವಾಸ ವೃತ್ತಾಂತ 'ಯಾನ ಸಂಸ್ಕೃತಿ' - ಮೊದಲೇ ಹೇಳಿದಂತೆ ನಿಸ್ಸಂಶಯವಾಗಿ 'ಹಿಗ್ಗಿಸುವ' ಕೃತಿ.

ಈ ಕೃತಿಯನ್ನು ನೀವು ಗಮನವಿಟ್ಟು ಓದಿದ್ದೇ ಆದರೆ ಈತನಕ ಅಷ್ಟೇನೂ ಪರಿಚಯವಿಲ್ಲದ ಸಿಂಗಪುರ ನಿಮಗೆ ಚಿರಪರಿಚಿತವೆನಿಸುತ್ತದೆ. ಅಲ್ಲಿನ ಅತಿ ಎನ್ನಿಸುವಂಥ ಅಚ್ಚುಕಟ್ಟು ಚೀನಿಯರ ಹುಬ್ಬುಗಂಟು, ಶಾಲಾಮಕ್ಕಳ ಮೆಲುಮಾತೂ, ಬಸ್ಸಿನ ಸುಖಾಸನಗಳೂ, ಹೋಟೆಲಿನ ಹಾವಿನ ಭಕ್ಷ್ಯವೂ, ಹಸಿರುಹುಲ್ಲೂ, ಲಕಾರನಯವಾದ ಆವರ ಸಿಂಗ್ಲೀಷೂ, ಅವರ ಕರ್ತವ್ಯ ಪ್ರಜ್ಞೆ ಇತ್ಯಾದಿ ಇತ್ಯಾದಿಗಳೆಲ್ಲ ನಿಮ್ಮ ಅನುಭವಕ್ಕೂ ಬರುತ್ತವೆ. ಶಾಂತಾ ಅವರು ಅದನ್ನು ಪರಿಚಯಿಸುವ ರೀತಿ ತುಂಬ ನವುರಾಗಿದೆ, ಮುದಕಾರಿಯಾಗಿದೆ. 'ಇದು ಯಾವ ಮಹಾ! ನನಗೆ ಗೊತ್ತಿಲ್ಲದ್ದು' ಎಂಬ ಅಹಂಭಾವದ ಧೋರಣೆಯಾಗಲಿ, 'ಹೇಗೋ ಏನೋ, ಇದರ ಸಹವಾಸವೇ ಬೇಡಪ್ಪ' ಎಂಬ ಹೆದರಿಕೆ - ಔದಾಸೀನ್ಯವಾಗಲಿ, ''ಇಲ್ಲಿರುವುದೆಲ್ಲ ಚೊಕ್ಕ ಚೆನ್ನ ನಮ್ಮದರಂತಲ್ಲ'' ಎಂಬ ನೈಚ್ಯಾನುಸಂಧಾನವಾಗಲಿ, ಇಲ್ಲ. ಹೊಸತರ ಬಗ್ಗೆ ಒಂದು ಆಸೆ, ಒಂದು ಬೆರಗು, ಒಂದು ಮೆಚ್ಚುಗೆ, ಒಂದು ಕುತೂಹಲ ಜೊತೆಜೊತೆಗೇ ಒಂದು ಪರಿಶೀಲನಾದೃಷ್ಟಿ ಇಲ್ಲಿ ಮೊದಲಿಂದ ಕೊನೆತನಕ ಕೆಲಸ ಮಾಡಿದೆ. ಕೇವಲ ಆರು ತಿಂಗಳ ಪ್ರವಾಸದಲ್ಲಿ ಇಷ್ಟೊಂದು ವರ್ಣವೈವಿಧ್ಯದ ಅನುಭವಗಳನ್ನು ಶಾಂತಾ ದಾಖಲಿಸುವುದನ್ನು ನೋಡಿದಾಗ ಅವರ ಪ್ರವಾಸದ ಆನಂದ - ಪ್ರಜ್ಞೆಯ ಜಾಗೃತಿಯೊಂದಿಗೆ ಸಮಪಾತಗೊಂಡಿರುವುದನ್ನು ಗಮನಿಸಬಹುದು. ಇಂಥ ಎಚ್ಚರವಿರದಿದ್ದರೆ ಆರು ತಿಂಗಳಿರಲಿ - ಆರು ವರ್ಷವಿದ್ದರೂ ವಿಭಿನ್ನ ಬದುಕಿನ ಲಯಗಳು ತಾಗುವುದೇ ಇಲ್ಲ.

ಈ ಎಚ್ಚೆತ್ತ ಪ್ರಜ್ಞೆಯ ಹಿಂದೆ ಇಲ್ಲಿ ಒಬ್ಬ ಮಹಿಳೆ ಇದ್ದಾಳೆ. ಆದ್ದರಿಂದ ಬಹುಶಃ ಪುರುಷನಿಗೆ ಗ್ರಹಿಸಲು ಕಷ್ಟಸಾಧ್ಯವಾಗಬಹುದಾಗಿದ್ದ ಎಷ್ಟೋ ಸಂಗತಿಗಳು ಲೀಲಾಜಾಲವಾಗಿ ಶಾಂತಾ ಅವರಿಗೆ ಅನುಭವಗಮ್ಯವಾಗುತ್ತದೆ. ಆ ಅನುಭವವನ್ನು ತುಂಬ ಲವಲವಿಕೆಯಿಂದ, ತಿಳಿಹಾಸ್ಯದ ಲೇಪದಲ್ಲಿ ಕಟ್ಟಿಕೊಡಲಾಗಿದೆ. ಚದುರಿದಂತಿರುವ 20 ಲೇಖನಗಳನ್ನು

ದೇಶ-ಭಾಷೆ, ಜನ-ಮನ, ಸಮಾಜ-ಮಹಿಳೆ ಎಂದು ವಿಭಾಗಿಸಿ ಒಂದು ಒಳ್ಳೆಯ ಚೌಕಟ್ಟನ್ನು ನಿರ್ಮಿಸಿಕೊಳ್ಳಲಾಗಿದೆ. ಎಲ್ಲೂ ವಿಷಯಗಳು 'ಓವರ್ ಲ್ಯಾಪ್' ಆಗುವುದಿಲ್ಲ. ಕಟ್ಟಿದ 30 ವರ್ಷಕ್ಕೆ ಕಡ್ಡಾಯವಾಗಿ ಉರುಳುವ ಮನೆ, ಬೀದಿಯಲ್ಲಿ ಜಗಳಾಡಿದರೆ ಕಟ್ಟಬೇಕಾದ ಸಾವಿರ ಡಾಲರಿನ ದಂಡ, ಒಬ್ಬರಿಗೆ ಬೇಡದ ವಸ್ತುವನ್ನು ಬೇಕೆನಿಸಿದವರು ನಿರ್ಭಿಡೆಯಿಂದ ಬಳಸಬಹುದಾದ ಪದ್ಧತಿ, ಹೆಚ್ಚು ಉಡುಗೊರೆಯ ಹಣ ನೀಡಿದವರಿಗೆ ಮಾತ್ರ ಭರ್ಜರಿ ಊಟ ನೀಡುವ ಅವರ ಸತ್ಕಾರ, ಟೈರ್ ತೊಳೆದುಕೊಂಡು ಬೀದಿಗಿಳಿಬೇಕಾದ ಲಾರಿಗಳು, ಪಿತೃಗಳ ಪೀತ್ಯರ್ಥವಾಗಿ ಅವರಿಗೆ ಬೇಕಾಗಿದ್ದರೆ ಕಾಗದದ ಪ್ರತಿಕೃತಿ ಸುಡುವ ಸಿಂಗಪುರೀಗಳ ವಿಚಿತ್ರ ಜಾಣ್ಮೆ - ಹೀಗೆ ಪುಟಪುಟದಲ್ಲೂ ಕುತೂಹಲ ಹುಟ್ಟಿಸುವ ನೂರಾರು ಸಂಗತಿಗಳು ಇಲ್ಲಿವೆ. ಅಲ್ಲಿ ಒದಗಿದ ಸಿಹಿ-ಕಹಿ ಎರಡು ಅನುಭವಗಳನ್ನು ದಾಖಲಿಸುವ ಪ್ರೌಢತೆ ಸಹ ಗಮನೀಯವಾದದ್ದೆ. ಜೊತೆಗೆ ಪುಸ್ತಕದಲ್ಲಿ ಬಳಸಿರುವ ಭಾವಚಿತ್ರಗಳು ಲೇಖಕಿಯ ಮಾತುಗಳಿಗೆ ಸಾಕ್ಷ್ಯಾಧಾರ ನುಡಿಯುವಂತಿವೆ. ರುಚಿ ಇಲ್ಲದ್ದನ್ನು ಹೇಳುವ ಒಣ ಒಣ ಬರವಣಿಗೆಯಾಗಲಿ, ಅನಗತ್ಯವಾಗಿ ಲಂಬಿಸುವ ಅತಿ ವಾಚಾಳತ್ವವಾಗಲಿ ಇಲ್ಲಿಲ್ಲ. ಇದೇ ಸಿಂಗಪುರದಲ್ಲಿ ಹುಡುಕಿದರೂ ಒಂದು ಹಿಡಿಮಣ್ಣು ಸಿಕ್ಕುವುದಿಲ್ಲವಂತೇ. ಪಾಪ, ಹೀಗಿರುವಾಗ ಅಲ್ಲಿಯ ಅಮ್ಮಂದಿರು ''ಆಡಿ ಬಾ ನನ್ನ ಕಂದ ಅಂಗಾಲ ತೊಳೆದೇನು'' ಎಂದು ಹಾಡುವುದಾದರೂ ಹೇಗೆ? ಬಹುಶಃ ಇದೇ ನಾಗರೀಕತೆಯ ವರವೂ, ಶಾಪವೂ, ಹೌದೇನೊ ಅದು ಹಾಡನ್ನು ಕಸಿದು, ಷೂಸನ್ನು ತೊಡಿಸುತ್ತದೆ.

ತಾನು ಸೃಷ್ಟಿಸುವ ಸುಂದರಾತಿ ಸುಂದರ ಪ್ಲಾಸ್ಟಿಕ್ ಹೂವಿನಂತೆ ಸುಂದರವಾಗಿರುವ ಸಿಂಗಪುರದ ಸಾಧನೆಯ ಸ್ವಚ್ಛತೆಯ, ಸಾಹಸದ ಯಶೋಗಾಥೆ ಇಲ್ಲಿದೆ. ಆದರೆ ಅದರಾಳದ ನೋವುಗಳೇನು ಎಂಬುದು ಇಲ್ಲಿ ತೀವ್ರವಾಗಿ ವ್ಯಕ್ತವಾಗುವುದಿಲ್ಲ. ಅದರ ಹೊರ ವ್ಯವಸ್ಥೆಯ ಅದ್ವಿತೀಯ ಕೌಶಲ್ಯದಷ್ಟು ಅದರ ಒಳವ್ಯವಸ್ಥೆ (ರಾಜಕೀಯ, ಆರ್ಥಿಕ, ಲಲಿತಕಲೆಗಳು ಇತ್ಯಾದಿ) ಪರಿಚಯಗೊಂಡಿಲ್ಲ. ಇಂಥ ಪರಿಚಯಕ್ಕೆ ಇನ್ನೂ ದೀರ್ಘಕಾಲದ ವಾಸ್ತವ್ಯ ಅಗತ್ಯವೇನೋ.

ಅಸಹನೆಯೇ ಮೂಲಮಂತ್ರವಾಗಿ, ಮತ್ತೊಂದು ಜೀವ, ಜನಾಂಗ, ಧರ್ಮ, ದೇಶ, ಭಾಷೆ, ಸಂಸ್ಕೃತಿಯನ್ನು ಸವರಿಸಿಕೊಂಡು ಹೋಗಲಾರದ ವಿಷಾದನೀಯ ಸ್ಥಿತಿಗೆ ಮುಚ್ಚುತ್ತಿರುವ ನಮಗೆ, ಇಂಥ ಪ್ರವಾಸ ಕಥನಗಳು ಅಗತ್ಯವಾಗಿ ಬೇಕು. ಜಗತ್ತಿನ ಜನರನ್ನು 'ಇವನಾರವ ಇವನಾರವ' ಎಂದೆನಿಸದೆ, ಒಂದು ಮಟ್ಟಕ್ಕಾದರೂ 'ಇವನಮ್ಮವ ಇವನಮ್ಮವ' ಎನಿಸಿ 'ತನ್ನಂತೆ ಪರರ ಬಗೆ'ವ ಬಗೆಯನ್ನು ಇಂಥ ಕೃತಿಗಳು ಪ್ರಚೋದಿಸುವಂತಾಗಲಿ.

## 'ದ್ರೌಪದಿಯ ಸಬಲೀಕರಣ'

ಪಂಜರದ ಹಕ್ಕಿಗೆ ಕನ್ನಡಿಯೊಳಗಣ
ಸಿಂಹಾಸನವ ತೋರಿ ರಮಿಸುವ ಪರಿ
ಮುವ್ವತ್ತು ಪ್ರತಿಶತ ಮೀಸಲಾತಿಯ ವೈಖರಿ.
ಸಭೆ, ಮೆರವಣಿಗೆ, ಘೋಷಣೆ
ಶತಶತಮಾನಗಳ ಶೋಷಣೆ
ಕೊನೆಗಾಣಿಸಲೆಂದು
ಎಲ್ಲೆಲ್ಲು ಚರ್ಚೆ 'ಎಷ್ಟು ಸುರಕ್ಷಿತರು ನಮ್ಮ ಮಹಿಳೆಯರಿಂದು?'

ರಾಜಸಭೆಯೊಳಗಂದು
ಉಟ್ಟವಸ್ತ್ರ ಸೆಳೆದು
ಕಟ್ಟಿದ ಮುಡಿ ಎಳೆದು
ಅಟ್ಟಹಾಸದಲಿ ಕೌರವ ಮೆರೆದಂದು
ಬೆತ್ತಲಾಗಲಿಲ್ಲ ದ್ರೌಪದಿ
ಸ್ತ್ರೀ ಸಬಲೀಕರಣ, ಸ್ತ್ರೀ ಸ್ವಾತಂತ್ರ್ಯ, ಸಮಾನತೆಗಳು ಮೊಳಗಿನಲಿ
ನಿಂದಿಹಳಿಂದು ದ್ರೌಪದಿ ಸಂಪೂರ್ಣ ಬೆತ್ತಲಾಗಿ.

ಬೀದಿ ಬೀದಿಯಲು ಅವಳ ಬೆತ್ತಲಾಗಿಸಿ
ಅಂಗಾಂಗಗಳ ಮೇಲೆ ಧಾಳಿ ನಡೆಸಿ,
ಆಸಿಡ್ ಸುರಿದು, ಚಿತೆಯೇರಿಸಿ,
ಉರಿಸುತಿರೆ, ಲಕ್ಷ ಲಕ್ಷ ದ್ರೌಪದಿಯರಿಗಿಂದು
ಅನಿವಾರ್ಯ ಶೀಲಭಂಗ ಅಂಗಭಂಗ.
ಹಸುಳೆ, ಎಳೆಬಾಲೆ, ಬುದ್ಧಿ ಮಾಂದ್ಯ ತರಳೆ,
ಸಾಧ್ಯವಿದ್ದಿದ್ದರೆ, ಗರ್ಭಸ್ಥ ಹೆಣ್ಣು ಕೂಸು,
ಎಲ್ಲರೂ ಸಂಭೋಗಾರ್ಹ, ವಿಕೃತ ಕಾಮಿಗಳಿಗೆ
ಕೀಚಕ, ದುರ್ಯೋಧನರ ನೇರ ನಡೆಯೂ ಇರದ ಪುರುಷ
ಪುಂಗವರಿಗೆ.

ಆದರೂ,
ಹೆಡೆಮೆಟ್ಟಿದ ಹಾವಾಗಿ, ಸೆಟೆದು ನಿಂತ
ದ್ರೌಪದಿಯ ಅನಂತ, ಧೀಮಂತ
ನಗ್ನತೆಯ ದರ್ಶನಕೆ, ಗಂಡು ಸ್ತಂಭೀಭೂತ
ತನುಮನ, ಹೃದಯಗಳ, ಹೊಳವ ಗಾಜಿನ ಸೀಸೆಯಾಗಿಸಿ
ಎಂದಿಗಿಂತಲೂ ಹೆಚ್ಚು ಬೇಧ್ಯೆಯಾಗಿರುವಳಿಂದು ದ್ರೌಪದಿ

ಸೀಸೆಯನು ಶಿಲೆಯಾಗಿಸಲಾರದೆ,
ಮೈತುಂಬ ನೆತ್ತರೊಸರುವ ಗಾಯ
ಮನತುಂಬ ಮುಳ್ಳು ಚುಚ್ಚಿದ ಗಾಯ
ಹೃದಯದಲಿ ಭಯ ಬಿತ್ತಿರುವ ಗಾಯ
ನಡುವೆ, ಮಿರುಗು ಬಲೆಗಳಲಿ ಸಿಲುಕಿ,
ಅತಿನವಿರು ಕೃತ್ರಿಮಗಳ ಜಾಲದ ಸೆಳಕಿನಲಿ,
ಸಂಭ್ರಾಂತ, ದ್ರೌಪದಿ ಅರಸುತಿದ್ದಾಳೆ
ತನ್ನ ಅಸ್ತಿತ್ವದ ನಿಜಸ್ಥಿತಿಯನು

- ಎಲ್. ವಿ. ಶಾಂತಕುಮಾರಿ

# ಭೈರಪ್ಪನವರ ಮಂದ್ರ - ಒಂದು ಅನಿಸಿಕೆ

- ಶ್ರೀಮತಿ ಇಂದಿರಾ

"ಮಹಾಗರತಿ ಹಂಗೆ ಹಟ ಮಾಡಿದಳು ಲೌಡಿ", ಎಂಬ ವಾಕ್ಯದೊಂದಿಗೆ ಹೆಣ್ಮಕ್ಕಳ ಮನಸ್ಸಿಗೆ ಬರೆ ಎಳೆದಂತೆ ಪ್ರಾರಂಭವಾಗುವ ಎಚ್.ಎಲ್. ಭೈರಪ್ಪನವರ ಮಂದ್ರ ಕಾದಂಬರಿ ಮೋಹನಲಾಲನಂಥ ಲಂಪಟನೊಬ್ಬನ ದುರ್ನಡತೆಯ ದುರ್ಗಂಧದ ಪರಿಚಯ. ಸಂಗೀತದ ಸಪ್ತಸ್ವರಗಳನ್ನು ಬೆನ್ನಟ್ಟಿ ವಶಪಡಿಸಿಕೊಂಡಂತೆ ಆತನ ಏಳು ಜನ ಹೆಂಗಸರೊಂದಿಗಿನ ಸಂಬಂಧಗಳನ್ನು ಸಮೀಕರಿಸಿ ಸಾಮ್ಯ ಕಲ್ಪಿಸುವುದಾದಲ್ಲಿ ಭೈರಪ್ಪನವರು ಸಂಗೀತಕ್ಕೂ ಸೂಳೆಗಾರಿಕೆಗೂ ವ್ಯತ್ಯಾಸವೇನೂ ಇಲ್ಲವೆಂಬುದನ್ನು ಹೀನಾಯವಾಗಿ ಚಿತ್ರಿಸಿದ್ದಾರೆ. ಉದಾಹರಣೆಕೊಡುವುದಾದರೆ ಮಂದ್ರದ ಪುಟಸಂಖ್ಯೆ 152, ಸಾಲು 31ರಿಂದ 36ರವರೆಗೂ, ಪುಟ 153ರ ಪ್ರಾರಂಭದ ಸಾಲುಗಳನ್ನು ನೋಡಿಕೊಳ್ಳಿ :-

ಅತಿ ಅಸಂಬದ್ಧ - ಅತ್ಯಂತ ಹೀನಾಯವೆನ್ನಿಸುವ ಪ್ರಕರಣಗಳನ್ನು ಬರವಣಿಗೆ ಮೂಲಕ ಹದಗೊಳಿಸುತ್ತ ಕೆಲವು ಪುಟಗಳ ಓದಿನ ನಂತರ ಅದೆಂಥ ಅಸಹ್ಯ ವಿಪರೀತ ಪ್ರಸಂಗವೇ ಆದರೂ ಓದುಗನ ತಲೆ ತಿರುಗಿಸಿ ಕೆಡಿಸಿ, ಅದೇ ಸರಿಯೆಂಬಂಥ ಭಾವವನ್ನು ಓದುಗನ ತಲೆಗೆ ತುಂಬಿಸಿ ಬಿಡಬಲ್ಲ ಬರವಣಿಗೆ ಭೈರಪ್ಪನವರೆಂದು ಅವರ ಕೃತಿಗಳನ್ನು ಓದಿದವರೆಲ್ಲರೂ ಒಪ್ಪುತ್ತಾರೆ. ಮಂದ್ರದಲ್ಲಿನ ಲಂಪಟತನದ ಪುನರಾವರ್ತಿತ ರಾಸಕ್ರೀಡೆಗಳು ಚುನ್ನಿ , ವೇಶ್ಯೆಯರು, ರಾಮಕುಮಾರಿ, ಚಂಪಾಬಾಯಿ, ಲಾರೆನ್‌ಸ್ಮಿತ್, ಮನೋಹರಿದಾಸ್, ಮಧುಮಿತಾರಂತಹ ಏಳು ಹೆಂಗಸರೊಂದಿಗೆ ಸಂಗೀತದ ಆರೋಹಣ ಕ್ರಮದಲ್ಲಿಯೇ ಅತ್ಯಂತ ಎತ್ತರಕ್ಕೇರಿ ಕೊನೆಯವಳಾದ ಮಧುಮಿತಾರ ಸಮ್ಮುಖದಲ್ಲಿ ಮೋಹನಲಾಲ ಸಂಗೀತ ಕಛೇರಿಯೊಂದರಲ್ಲಿ ಸಂಪೂರ್ಣ ಸೋಲುಂಡು ಅವಮಾನಿಕನಾಗುತ್ತಾನೆ. ಅದು ಕೂಡಾ ಮಧು ಮಿತಾ ಆತನೊಂದಿಗೆ ಉದ್ಧಟತನದಿಂದ ವರ್ತಿಸಿದ ಕಾರಣ 'ಮನಸ್ಸಿನ ಏಕಾಗ್ರತೆ ಸಾಧಿಸಲಾಗದೆ' ಹಾಗಾಯಿತೆಂದು ನಿರೂಪಿಸಿರುವುದು ಅತ್ಯಂತ ಹಾಸ್ಯಾಸ್ಪದ. ಅತ್ಯಂತ ಹೀನಾಯ ಕಥಾನಾಯಕನಿದ್ದೂ, ಕಾದಂಬರಿಯಲ್ಲಿ ಲೇಖಕರು ಯಾವುದೇ ನೈತಿಕ - ತಾತ್ವಿಕ ಮೌಲ್ಯಗಳಿಗೆ ಒತ್ತು ಕೊಟ್ಟು ಪ್ರತಿಪಾದಿಸಿಲ್ಲ, ಕೆಲವು ಕಡೆ ಕಥಾನಾಯಕನನ್ನು ಮುದ್ದಿನಿಂದ ಗದರಿದ್ದಾರೆ ಅಷ್ಟೇ! ಇಂದಿನ ಪೀಳಿಗೆಯ ಓದುಗರಿಗೆ ಇಂಥ ಮೋಹನ ಲಾಲ ಹೀರೋ ಎನ್ನಿಸಬಹುದಾದ ಅಪಾಯ ಕಡೆಗಣಿಸುವಂಥದೇನೂ ಅಲ್ಲ. (ದ್ವಾಪರದ ಕೃಷ್ಣನ ಜನಪ್ರಿಯತೆ ನೋಡಿ!)

ಸಮಾಜದಲ್ಲಿ ಎಷ್ಟೇ ಹೀನ ನಡವಳಿಕೆಗಳಿದ್ದಾಗ್ಯೂ ಆ ಬಗ್ಗೆ ಕಾದಂಬರಿಯಲ್ಲಿ ಚಿತ್ರಿತನಾದ ಕಥಾನಾಯಕನೂ ಅಷ್ಟೇ ಹೀನ ಸಂಸ್ಕೃತಿಯವನಾದಾಗ ಒಬ್ಬ ಲೇಖಕ ತನ್ನ ಪ್ರಾಮಾಣಿಕ ನೈತಿಕ ಮೌಲ್ಯಗಳನ್ನು ಒಂದು ಚಿಕ್ಕ ಪಾತ್ರದ ಮೂಲಕ ಅಥವಾ ಸಂಕೇತವೊಂದರ ಮೂಲಕ ಪ್ರತಿಫಲಿಸದೇ ಹೋದಲ್ಲಿ ಅಂಥ ಕೃತಿಯನ್ನು ನೈತಿಕ ಪ್ರಜ್ಞೆ ಇರುವ ಓದುಗ ಎಂದೂ ಸಹಿಸಲಾರ! ಸಂಗೀತ ಕಛೇರಿಯಲ್ಲಿ ಆತನನ್ನು ಸೋಲಿಸಿದ್ದೇನೆಂದು ಸಮರ್ಥಿಸ ಹೋದರೂ ಅಲ್ಲಿ ಸೋತಿರುವುದು ಸಂಗೀತವಲ್ಲದೆ ಮೋಹನಲಾಲ ಅಲ್ಲವೆಂಬುದು ಗಮನಿಸುವ ವಿಚಾರ. ಅಷ್ಟೇ ಅಲ್ಲ, ಲಾರೆನ್ ಸ್ಮಿತ್ ಮೂಲಕ ಮೋಹನಲಾಲ್‌ನ ಪಾತ್ರ ಸೋಲುವ ಸಾಧ್ಯತೆಯೊಂದು ಬಂದಿದ್ದಾಗ ತುಂಬ ಜಾಣತನದಿಂದ (?) ಲೇಖಕರು ಅದನ್ನು ತಪ್ಪಿಸಿದ್ದಾರೆ. ಜನಪ್ರಿಯತೆ ಪಡೆದಾದ ಮೇಲೆ ಏನನ್ನು ಬರೆದರೂ ಜನ ತಲೆದೂಗುತ್ತಾರೆಂದು ಯಾವ ಸಾಹಿತಿಯೂ ತಿಳಿಯಬಾರದು.

ಮೋಹನ ಲಾಲನದು ಸಂಗೀತದ ಭಾಷೆ. ರಾಗ-ತಾಳ-ಲಯಗಳೆಂಬ ಸಂಗೀತ ಪರಿಭಾಷೆ ಬಳಸಿ ಕಥಾನಾಯಕನ ಅಶ್ಲೀಲ ನಡವಳಿಕೆಗಳನ್ನು ಬೆಣ್ಣೆಯಲ್ಲಿನ ಕೂದಲೆಳೆಯಂತೆ ಅತಿಸೂಕ್ಷ್ಮವಾಗಿ ಸಮೀಕರಿಸುತ್ತ ದ್ವಂದ್ವಾರ್ಥ ಪ್ರಯೋಗವನ್ನು ಅಡ್ಡಗೋಡೆಯ ದೀಪದಂತೆ ಕೂಡಿಸಿ ಅಗ್ಗದ ಮನರಂಜನೆ ನೀಡಿದ್ದಾರೆ. ಮಹಾಭಾರತದ ಪುನರ್ ಸೃಷ್ಟಿಯಾದ 'ಪರ್ವ'ದ ಅಮಲಿನಲ್ಲಿ ಮಂದ್ರವನ್ನು ನೋಡಲು ಸಾಧ್ಯವಿಲ್ಲ. ಏಕೆಂದರೆ ಇದು ಭೈರಪ್ಪನವರ ಸೃಷ್ಟಿ, ಮರುಸೃಷ್ಟಿ ಅಲ್ಲ. ಇಲ್ಲಿನ ಜವಾಬ್ದಾರಿಯೆಲ್ಲ ಭೈರಪ್ಪನವರದೇ. ಇಂದು ನೈತಿಕ - ಅನೈತಿಕದ ಮಧ್ಯೆ ಭೇದ ಗುರುತಿಸಲಾಗದ ಸಾಹಿತ್ಯ ಬರುತ್ತಿರುವುದು ಖೇದದ ವಿಷಯ. ಎಳೆಯರಿಗೆ ಕೃತಿಯ ಮೌಲ್ಯ ಗುರುತಿಸಿ ಹೇಳುವವರಾರು? ಒಟ್ಟಾರೆ ಭೈರಪ್ಪನವರ ಕಾದಂಬರಿಯಲ್ಲಿ ಸಾಮಾನ್ಯವಾಗಿ ಪ್ರತಿಪಾದಿಸಲ್ಪಟ್ಟ ಅಂಶವೆಂದರೆ ಲೈಂಗಿಕ ಕಾಮನೆಯನ್ನು ಗೆಲ್ಲಲು ಮನಷ್ಯರಿಂದ ಸಾಧ್ಯವಿಲ್ಲ ಎಂಬ ಸೋತ ನಿರ್ಣಯ ಅಥವಾ ಪ್ರತಿಪಾದನೆ. ಆ ಸಮಸ್ಯೆಗೆ ಗೌರವಯುತ ವೈವಾಹಿಕ ಚೌಕಟ್ಟು ಒದಗಿಸಿದ ನಮ್ಮ ಭಾರತೀಯ ಸಮಾಜದಲ್ಲಿ ಇನ್ನೊಂದು ಹೆಜ್ಜೆ ಮುಂದಿಟ್ಟರೂ ಅದು ಲಂಪಟತನವೆಂದೇ ಹೇಳಲಾಗಿದೆ. ಹೀಗಿರುವಾಗ ಕಾದಂಬರಿಗಳ ಮೂಲಕ ವಿಕೃತ - ಸ್ವೇಚ್ಛಾಲಂಪಟತನವನ್ನು ನೀರು - ಗೊಬ್ಬರ ಒದಗಿಸಿ ವಿಪರೀತ ಪೋಷಿಸಬೇಕಾದ ಅಗತ್ಯ ಏನಿದೆ? ನಮ್ಮ ದೃಶ್ಯ - ಶ್ರವಣ - ಸಾಹಿತ್ಯ ಮಾಧ್ಯಮಗಳಿಗೆ ಜವಾಬ್ದಾರಿಯಿಲ್ಲವೆ? ನಾವು ಮಂದ್ರ ಮೂಲಕ ಲೇಖಕರ ಸುಪ್ತ ಮನಸ್ಸಿನ ವಿಕೃತ-ಮಾನಸಿಕ ಅಪೇಕ್ಷೆಗಳನ್ನು ಬೆನ್ನು ಹತ್ತಿ ನೋಡತೊಡಗಿದರೆ ಸಂಗೀತ ಲಂಪಟತನದ ಮೂಲಕ ಮೋಹನಲಾಲನನ್ನು ಗುರುತಿಸಿದಂತೆ ಸಾಹಿತ್ಯದ ಮೂಲಕ ಭೈರಪ್ಪನವರನ್ನೂ ಸಮೀಕರಿಸಿ ನೋಡಲು ಅಡ್ಡಿಯೇನಿಲ್ಲ. ಮೋಹನಲಾಲನ ಕರಿನೆರಳು ಬೀಳದ ದಿಟ್ಟ ಪಾತ್ರವೊಂದನ್ನು ಭೈರಪ್ಪನವರು ಏಕೆ ಇಲ್ಲಿ ಸೃಷ್ಟಿಸಲಿಲ್ಲ? ಆ ಕೊರತೆ ಮಂದ್ರವನ್ನು ಸಪ್ತ ಸ್ವರಗಳ ಸುಶ್ರಾವ್ಯ ಸಂಗೀತವಾಗಲು ಖಂಡಿತ ಬಿಡಲಾರದು.

★

## ಭೂಮಿ.... ಏನಿದು! ಭೂ ದಾಖಲೆಗಳನ್ನು ಗಣಕೀಕರಿಸುವ ಬೃಹತ್ ಯೋಜನೆ

ಇದು ಕರ್ನಾಟಕ ಸರ್ಕಾರದ ಅನುಕರಣೀಯ ಕಾರ್ಯ ಸಾಧನೆ. ಈ ಯೋಜನೆಯಿಂದಾಗಿ ಇನ್ನು ಮುಂದೆ ನಮ್ಮ ರೈತ ಬಾಂಧವರು ತಮ್ಮ ಪಹಣಿಗಳಿಗಾಗಿ ದಿನಗಟ್ಟಲೆ ಪರದಾಡಬೇಕಾಗಿಲ್ಲ. ಹಳೆಯದಾದ, ಹರಿದುಹೋದ ಪಹಣಿಗಳಿಗಾಗಿ ಚಿಂತಿಸಬೇಕಾಗಿಲ್ಲ. ಈಗ ಪಹಣಿಗಳು ಕಂಪ್ಯೂಟರೀಕರಣಗೊಂಡಿವೆ. ತಮ್ಮ ಭೂಮಿಯ ಎಲ್ಲಾ ವಿವರಗಳು ರೈತರಿಗೆ ರೈ ಬೆರಳ ತುದಿಯಲ್ಲಿ ಲಭ್ಯ. ಇದೀಗ 67 ಲಕ್ಷ ರೈತರಿಗೆ ಸೇರಿದ 2 ಕೋಟಿ ದಾಖಲೆಗಳು ರಾಜ್ಯದ ಎಲ್ಲಾ 176 ತಾಲ್ಲೂಕುಗಳಲ್ಲಿಯೂ ಸದ್ದುಗದ್ದಲವಿಲ್ಲದೆ ಕಂಪ್ಯೂಟರ್‌ಗಳಲ್ಲಿ ದಾಖಲಾಗಿವೆ. ರೈತರು ಇನ್ನು ಮುಂದೆ ತಮ್ಮ ಪಹಣಿಯ ವಿವರಗಳ ಪ್ರತಿಯನ್ನು ಕೇವಲ ಎರಡೇ ನಿಮಿಷದ ಅವಧಿಯೊಳಗಾಗಿ ಪಡೆದುಕೊಳ್ಳಬಹುದಾಗಿದೆ. ಇಲ್ಲಿ ರೈತರ ಅವಕಾಶವಿಲ್ಲ, ಮಧ್ಯವರ್ತಿಗಳ ಹಾವಳಿ ಇಲ್ಲ ಅನಗತ್ಯ ಕಟ್ಟಳೆಗಳ ಕಿರಿಕಿರಿಯಿಲ್ಲ. ವರ್ಷದಲಿ ಒಂದು ಬಾರಿ ಉಚಿತವಾಗಿ ರೈತರ ಮನೆಬಾಗಿಲಿಗೆ ಕಳುಹಿಸಲ್ಪಡುವ ಈ ಗಣಕೀಕೃತ ಭೂ ದಾಖಲೆಗಳ ಹೆಚ್ಚುವರಿ ಪ್ರತಿ ಬೇಕಾದಲ್ಲಿ ಮಾತ್ರ ರೈತರು ಕೇವಲ ರೂ 15-00ಗಳನ್ನು ಪಾವತಿ ಮಾಡಿ ಪಡೆಯಬಹುದಾಗಿದೆ. ರಾಷ್ಟ್ರದಲ್ಲೆ ಪ್ರಥಮ ಯೋಜನೆ ಎಂಬ ಹೆಗ್ಗಳಿಕೆ ಇದಕ್ಕೆ.

ಜಗತ್ತೇ ಈ ಯೋಜನೆಯೆಡೆಗೆ ಮೆಚ್ಚುಗೆಯಿಂದ ನೋಡುವಂತಾಗಿದೆ. ಪ್ರತಿಷ್ಠಿತ 'ಸ್ಟಾಕ್ ಹೋಂ ಚಾಲೆಂಜ್ 2002'ರ ಪ್ರಶಸ್ತಿಗಾಗಿ ಜಗತ್ತಿನ 89 ದೇಶಗಳ 600 ಸ್ಪರ್ಧಿಗಳೊಂದಿಗೆ ಅಂತಿಮ ಹಣಾಹಣಿಯಲ್ಲಿ ನಿಂತಿರುವುದು ಈ ಯೋಜನೆಯು ಗಳಿಸಿರುವ ಮೆಚ್ಚುಗೆಗೆ ಸಾಕ್ಷಿ.

**ಮುಖ್ಯಾಂಶಗಳು :**

- ಜನ ಸಮುದಾಯಕ್ಕೆ ತಲುಪಲು ರಾಷ್ಟ್ರದ ಪ್ರಪ್ರಥಮ ಬೃಹತ್ ಪ್ರಮಾಣದ ಮಾಹಿತಿ ತಂತ್ರಜ್ಞಾನ ಯೋಜನೆ.
- ಪ್ರತಿ ವರ್ಷ ಭೂ ದಾಖಲೆ ಪತ್ರಗಳ ಒಂದು ಉಚಿತ ಪ್ರತಿಯನ್ನು ರೈತರ ಮನೆ ಬಾಗಿಲಿಗೆ ರವಾನೆ.
- ಭೂ ದಾಖಲೆ ಪತ್ರಗಳ ತಿದ್ದುವಿಕೆಗೆ ಅವಕಾಶವಿಲ್ಲ.
- ಕಿಯೋಸ್ಕ್‌ಗಳಲ್ಲಿ ಸಲ್ಲಿಸಲ್ಪಡುವ ಖಾತೆ ಬದಲಾವಣೆ ಅರ್ಜಿಗಳ ಸಂಸ್ಕರಣೆ ಕೇವಲ 35 ದಿನಗಳಲ್ಲಿ ವಿಳಂಬವಾದಲ್ಲಿ ಕುಂದುಕೊರತೆಗಳ ಪರಿಹಾರಕ್ಕೆ ಸಧೃಡ ವ್ಯವಸ್ಥೆ.
- ಕಿಯೋಸ್ಕ್‌ಗಳಿಗೆ ಖುದ್ದಾಗಿ ಭೇಟಿ ಕೊಡುವ ಅಗತ್ಯವಿಲ್ಲ. ಗ್ರಾಮಲೆಕ್ಕಿಗರು ಅಥವಾ ಬೇರೆ ಯಾರಾದರೂ ಸಹ ದಾಖಲೆ ಪತ್ರಗಳನ್ನು ಖರೀದಿಸಲು ಕೋರಬಹುದು.
- ರೈತರು ಅಧಿಕಾರಿಯ ನೆರವಿನ ಅಗತ್ಯವಿಲ್ಲದೆ ಕಿಯೋಸ್ಕ್‌ನಲ್ಲಿ ಅವರ ದಾಖಲೆ ಪತ್ರಗಳನ್ನು ನೋಡಬಹುದು.
- ದಾಖಲೆ ಪತ್ರಗಳನ್ನು ಪಡೆಯಲು ಬಹು ದೂರ ಪ್ರಯಾಣ ಮಾಡುವುದನ್ನು ತಪ್ಪಿಸಲು ಹೋಬಳಿಗಳಿಗೂ (ಉಪ ತಾಲ್ಲೂಕುಗಳಿಗೂ) ಯೋಜನೆಯ ವಿಕೇಂದ್ರೀಕರಣ.
- ಕೃಷಿ ಸಾಲವನ್ನು ಸುಲಭವಾಗಿ ಮತ್ತು ತೀವ್ರವಾಗಿ ಪಡೆಯಲು ಅನುವಾಗುವಂತೆ 2500 ಬ್ಯಾಂಕ್ ಶಾಖೆಗಳ ಸಂಪರ್ಕ ಕಲ್ಪಿಸಲು ವ್ಯವಸ್ಥೆ.
- ಭೂ ವಿವಾದ ಪ್ರಕರಣಗಳ ಶೀಘ್ರ ವಿಲೇವಾರಿಗೆ ನ್ಯಾಯಾಲಯಗಳಿಗೂ ಸಂಪರ್ಕ ಕಲ್ಪಿಸಲು ಯೋಜನೆ.

***ಕರ್ನಾಟಕದಲ್ಲಿ ಇನ್ನು ಮುಂದೆ ಕೈಬರಹದ ಪಹಣಿಗಳಿಗೆ ಮಾನ್ಯತೆ ಇಲ್ಲ.***

**- ಕರ್ನಾಟಕ ವಾರ್ತೆ**

ಭೇಟಿ ನೀಡಿ :**www.bhoomi.kar.nic.in.**

## ಶಾಂತಿ ಗೀತೆ

ಅಮೆರಿಕ ದೇಶದ ಯುದ್ಧದ ಕರೆಯನು
ವಿರೋಧಿಸೋಣ ನಾವ್ ಜನರೆ
ಸಾಮ್ರಾಜ್ಯ ಶಾಹಿಯ ತೈಲದ ದಾಹಕೆ
ಇನ್ನೆಷ್ಟು ಬಲಿ ಹೇಳಿ ನೀವುಗಳೆ

ಶಾಂತಿಗೆ ನೀವೊಂದು ಅವಕಾಶ ನೀಡಿರಿ
ಯುದ್ಧದ ಕರೆಯನು ಖಂಡಿಸಿರಿ
ಬದುಕನು ಪ್ರೀತಿಸಿ, ಗಾಂಧಿಯ ಸ್ಮರಿಸಿ
ಬುದ್ಧನ ನೆಲದ ನಿವಾಸಿಗಳೆ

ಬಿನ್ ಲಾಡನ್ ಸದ್ದಮರು, ಹುಟ್ಟಲಿಲ್ಲ ಗರ್ಭದಲ್ಲೆ
ಸೃಷ್ಟಿಸಿದರು ಇವರ ನಮ್ಮ ದೊಡ್ಡಣ್ಣರು
ಅಸ್ತ್ರಶಸ್ತ್ರ ಮಾರಿ ಮೆರೆದು, ಲಾಭ ದೋಚಿಕೊಂಡರಿವರು
ಆತಂಕವಾದಕೆ ಜನ್ಮ ಇತ್ತರು

ನೆರೆಮನೆಗಿಟ್ಟ ಕೊಳ್ಳಿ, ಸುಟ್ಟಿತವರ ಮನೆಯನ್ನೆ
ಕುಸಿಯಿತು ವಾಣಿಜ್ಯ ಗೋಪುರವು
ಆತಂಕವಾದದ ನೆಪ ಹಿಡಿದು, ಕುದುರೆ ಏರಿ
ಕಾಳಗಕ್ಕೆ ಹೊರಟನಪ್ಪ ಸರದಾರನು

ವಿಶ್ವಕೆಲ್ಲ ಅಸ್ತ್ರ ಹಂಚಿ, ಶಾಂತಿಯನ್ನು ಮೂಲೆಗಟ್ಟಿ
ಇರಾಕಲ್ಲಿ ಕೊಂದರಿವರು ಸಾವಿರಾರು ಮಕ್ಕಳ
ನಿಲ್ಲದಿವರ ಅಟ್ಟಹಾಸ, ಯುದ್ಧದ ದಾಹ ವಿಪರೀತ
ಸಿರಿಯಾ ಕೊರಿಯಾ ದಂಡಯಾತ್ರೆ ಹೋಗಲಿಹರು

ಸಾವಿರ ಸಾವಿರ ಸಂಖ್ಯೆಯಲ್ಲಿ ಶಾಂತಿಗಾಗಿ ಕೂಗಿದರೂ
ಕಿವುಡ ರಾಜನಿವನು ನೋಡಿ, ಕೇಳಲೊಲ್ಲನು
ಕಂದಗಳ ಕಣ್ಣ ಕನಸ, ಉಳಿಸಲೆಂದು ಕೂಡಿ ಬನ್ನಿ
ಯುದ್ಧವನ್ನು ತಡೆಯಲೆಂದು ಓಡಿಬನ್ನಿರಿ
ಯುದ್ಧವನ್ನು ತಡೆಯಲೆಂದು ಓಡಿಬನ್ನಿರಿ

- ನೇಮಿಚಂದ್ರ

## ಸರಕಾರ ಮತ್ತು ಸಬಲೀಕರಣ

ಇನ್ನಾದರೂ ನೀವು ಆಗಬೇಕು
ಚಿಂತಕರು ಕ್ರಿಯಾಶೀಲರು ಸಬಲರು
ಹುಡುಕಬೇಕು ಹೊಸದಾರಿ
ಕಟ್ಟಬೇಕು ಹೊಸ ಸಮಾಜ
ಅದೇ ಸಬಲೀಕರಣ ಎಂದ ಸರಕಾರ
ಮಹಿಳಾ ದಿನಾಚರಣೆಯೆಂದು
ಒಂದಂಕಿ ಲಾಟರಿ ವಿರುದ್ಧ
ಹುಟ್ಟಿದ ಜಾಥಾ ಹರತಾಳೆಗಳ
ಕಂಡು ಬೆಚ್ಚಿ ಕರೆಕೊಟ್ಟಿತು
ಮಾಡಿರಿ ಹರತಾಳ ಎಷ್ಟೂ
ಒಂದಿಷ್ಟು ಫಲಕ ಹಿಡಿದು
ಊರೆಲ್ಲ ಸುತ್ತಿ ಬನ್ನಿ ಸಾಕು
ಮುಟ್ಟದಿರಿ ಸೊತ್ತುಗಳ ಎಳ್ಳಷ್ಟೂ
ಅಕ್ಕಿ ಉಪ್ಪು ಮೆಣಸು ತೆಂಗಿಗೆ
ಇಲ್ಲದಿದ್ದರೇನಂತೆ ಕಾಸು
ಲಾಟರಿಗೆ ಹಾಕಿದರೆ ಬಂದೀತು
ಲಕ್ಷ ಇಂದಲ್ಲ ನಾಳೆ ಅಲ್ಲ ನಾಳಿದ್ದು
ಅನಾದಿ ಈ ಜೂಜು
ಅದ ತಡೆಯಲು ನಾವ್ಯಾರು
ಕೆರೆಯ ನೀರನು ಕೆರೆಗೆ ಚೆಲ್ಲಿದಂತೆ
ನಾವೇನೂ ಉಂಡಿಲ್ಲ ನಿಮಗೇ ಎಲ್ಲ
ಉಚಿತ ಸ್ತ್ರೀ ಶಿಕ್ಷಣ ಸಮವಸ್ತ್ರ ಪಿಂಚಣಿಗೆ
ಲಾಭವೇನೂ ಇಲ್ಲ ನಮ್ಮದು ಲೋಕಕಲ್ಯಾಣ
ಒಂದಲ್ಲ ಹತ್ತು ಹೆಗ್ಗಣಗಳ ತರುವೆವು
ಆಗಿರಿ ನೀವೆಲ್ಲ ಕಿಂದರ ಜೋಗಿ
ಒಲಿಸಿ ರಮಿಸಿ ಆಗದೆ ಹೋದರೆ
ಮನೆಮಟ್ಟಿಗಾಗಿ ಚೆನ್ನವ್ವ ಓಬವ್ವ
ದನಿ ಎತ್ತಿ ನಾವು ಹೇಳಿದ್ದಕ್ಕೆ
ಬೇಡದಿರಿ ಇದಕ್ಕಿಂತ ಹೆಚ್ಚು
ನೀವೇ ದನಿಯಾಗಬೇಡಿ
ಅಬಲತ್ವವೇ ನಿಮಗೆ ಶೋಭೆ.

- ಡಾ॥ ಸಬಿಹಾ

# ಯುದ್ಧದ ವಿರುದ್ಧ ಬಹಿಷ್ಕಾರ ಯುದ್ಧ

## ಅಮೇರಿಕ-ಬ್ರಿಟಿಷ್ ಉತ್ಪನ್ನಗಳನ್ನು ಬಹಿಷ್ಕರಿಸಿರಿ




ಕೃಪೆ : ದ.ಕ. ಜಿಲ್ಲೆಯ ಯುದ್ಧ ವಿರೋಧಿ ಐಕ್ಯ ಸಮಿತಿಯ ಕರಪತ್ರದಿಂದ

# ಯುದ್ಧದ ವಿರುದ್ಧ - ಬಹಿಷ್ಕಾರ ಯುದ್ಧ

**ಬಹಿಷ್ಕಾರ** ಇರಾಕಿನ ಮೇಲೆ ಆಕ್ರಮಣ ಎಸಗಿರುವ ಇರಾಕಿನ ಮುಗ್ಧ ಜನತೆಯ ಕೊಲೆಗೆ ಕಾರಣರಾದ ಅಮೆರಿಕಾ ಮತ್ತು ಬ್ರಿಟನ್‌ನನ್ನು ಬಹಿಷ್ಕರಿಸಿ. ಬಹಿಷ್ಕಾರ ಜನತೆಯ ಶಕ್ತಿಯ ಸಂಕೇತ. ಅದು ಜನತೆಯ ಆರ್ಥಿಕ ಮತ ಪತ್ರ ಮತ್ತು ಯುದ್ಧ ಪಿಪಾಸು ರಾಷ್ಟ್ರದ ಆರ್ಥಿಕತೆಯ ವಿರುದ್ಧದ ಅಹಿಂಸಾತ್ಮಕ ಪ್ರತಿಭಟನೆ.

### ತಂಪು ಪಾನೀಯಗಳು
ಕೋಕೋಕೋಲಾ, ಪೆಪ್ಸಿ ಮೆಕ್‌ಡೊನಾಲ್ಡ್ ಪಿಂಪೀಸ್ ರಿಫಾಟ್ಸ್ ಮಿರಿಂಡ, ಫಾಂಟ ಸೆವನಪ್, ಟಾಂಗ್, ಮೌಂಟನ್ ಡ್ಯೂ.

### ಸಾಬೂನುಗಳು
ಲಕ್ಸ್ ರೆಕ್ಸೋನಾ, ಲಿರಿಲ್, ಡೆಟೋಲ್, ಲೈಫ್‌ಬಾಯ್, ಬ್ರೀಝ್, ಪಿಯರ್ಸ್ ಮೋಟ್ಸಿ ನಿವಿಯ, ಡೋವ್, ಡೆನಿಮ್, ಪಾಮೋಲಿವ್, ಜಯ್, ಜಾನ್‌ಸನ್ ಅಂಡ್ ಜಾನ್‌ಸನ್ಸ್.

### ವಾಷಿಂಗ್ ಪೌಡರ್
ಏರಿಯಲ್, ಸರ್ಫ್, ಸನ್‌ಲೈಟ್, ಟೈಡ್, ರಿನ್, ವಿಮ್, ವೀಲ್

### ಟೂತ್‌ಪೇಸ್ಟ್
ಕೋಲ್‌ಗೇಟ್, ಕ್ಲೋಸಪ್, ಪೆಪ್ಸೋಡೆಂಟ್, ಸಿಬಾಕಾ, ಎಕೋಫ್ರೆಶ್.

### ಶಾಂಪೂ
ಸನ್‌ಸಿಲ್ಕ್, ಪೆನ್‌ಟೀನ್, ಹೆಡ್ ಅಂಡ್ ಶೋಲ್ಡರ್, ಕ್ಲಿನಿಕ್, ಆರ್ಗನಿಕ್, ಲಕ್ಸ್

### ಟಾಲ್ಕಮ್ ಪೌಡರ್
ಕುಟ್ಟಿಕ್ಯೂರ, ಪಾಂಡ್ಸ್ ನಿವಿಯ, ಲಿರಿಲ್, ಡೆನಿಮ್, ಫಾ, ಷವರ್ ಟು ಷವರ್

### ಕೋಸ್ ಮೆಟಿಕ್ಸ್ (ಸೌಂದರ್ಯ ವರ್ಧಕ)
ಇಂಪೀರಿಯಲ್ ಲೆದರ್, ಯಾರ್ಡ್‌ಲೀ, ಫೇರ್ ಅಂಡ್ ಲವ್‌ಲೀ, ಲೊಲೋನ್

### ಬ್ಲೇಡ್
ಸವನ್ ಓಕ್ಲೋಕ್, ವಿಲ್‌ಕಿನ್‌ಸನ್, ಗಿಲ್ಲಟ್ಸ್

### ಕೇಶ ತೈಲ
ವ್ಯಾಸ್‌ಲೀನ್, ಕ್ಲಿನಿಕ್, ಆಯಿಲ್ ಆಫ್ ಒಲೆ

### ಶೇವಿಂಗ್ ಕ್ರೀಮ್
ಡೆರೋಕೋಲ್, ವಿಲ್‌ಕಿನ್‌ಸನ್, ಗಿಲ್ಲಟ್ಸ್ ಪಾಮೋಲಿವ್

### ಮಿಲ್ಕ್ ಪೌಡರ್
ಎವ್‌ರೀಡೇ, ಅನಿಕ್ ಸ್ಪ್ರೇ, ನೆಸ್ಲೆ ಉತ್ಪನ್ನಗಳು

### ಚಾ ಪುಡಿ
ತಾಜ್‌ಮಹಲ್, ಏ ವನ್, ತಾಝಾ, ಗ್ರೀನ್ ಲೇಬಲ್, ರೆಡ್‌ಲೇಬಲ್, ಸನ್‌ರೈಸ್

### ಕಾಫಿ
ನೆಸ್ಲೇ ಉತ್ಪನ್ನಗಳು

### ಭಕ್ಷ್ಯ ಉತ್ಪನ್ನಗಳು
ಹಾರ್ಲಿಕ್ಸ್ ನೆಸ್ಲೇ, ಮೋಡರ್ನ್ ಬ್ರೆಡ್, ಮೈಲೋ, ಬೋರ್ನ್‌ವೀಟಾ ಬೂಸ್ಟ್ ಸಿರಿಲ್ಯಾಕ್, ನೆಸ್ಪಮ್, ಮೆಕ್‌ಡೊನಾಲ್ಡ್ ಫಿಝ್ಝಾಹಟ್, ಮ್ಯಾಗೀ

### ಬಾಟ್ಲಿ ನೀರು
ಅಕ್ವಾಫಿನ್, ಕಿನ್‌ಲೇ

### ರೆಡಿಮೇಡ್ ಬಟ್ಟೆಗಳು
ಲೀ, ಲೀ ಕೂಪರ್, ಪೀಟರ್ ಇಂಗ್ಲಂಡ್, ಲೂಯಿಸ್ ಫಿಲಿಪ್, ಲೌಡೆಲ್ ನ್ಯೂಪೋರ್ಟ್, ಪಾಕೋಸ್ಟ್ ಆ್ಯರೋ, ವ್ಯಾನ್ ಹುಸೇನ್

### ಶೂಸ್
ನೈಕ್, ಏರ್‌ವಾಕ್, ಅಡಿಡಾಸ್

### ಮಿಠಾಯಿಗಳು
ಕ್ಯಾಡ್‌ಬರೀಸ್, ಕಿಟ್‌ಕ್ಯಾಟ್, ಬಾರ್ ವನ್, ಮಂಚ್, ಡೈರಿ ಮಿಲ್ಕ್, ಪೋಲೋ, ಪರ್ಕ್

### ವನಸ್ಪತಿ
ಡಾಲ್ಡ

### ಬ್ರಷ್‌ಗಳು
ಕೋಲ್ಗೇಟ್, ಪೆಪ್ಸೋಡೆಂಟ್, ಸಿಬಾಕಾ

### ಸಿಗರೇಟ್
ಮಾಲ್‌ಬರೋ, ತ್ರೀಫೈವ್, ಕ್ಯಾಮಲ್, ವರ್ಜೀನಿಯಾ

### ಇಲೆಕ್ಟ್ರಾನಿಕ್ಸ್
ಪಾರ್ಕರ್, ವಾಟರ್‌ಮೆನ್, ಲಕ್ಷರ್, ಮೋಂಟೆಕ್ಸ್ ಆ್ಯಡ್ಜೆಲ್

### ಸೊಳ್ಳೆ ಬತ್ತಿಗಳು
ಮೋರ್‌ಟೀನ್, ರೈಡ್

### ಇತರ ವಸ್ತುಗಳು
ವಿಕ್ಸ್

### ಐಸ್‌ಕ್ರೀಮ್
ಬಾಸ್ಕಿನ್ ರಾಬಿನ್ಸ್ ಐಸ್‌ಕ್ರೀಮ್

# ಪ್ಲೇವಿನ್ ಮಾರಿಯ ವಿರುದ್ಧ

ರಾಜ್ಯದ ಆದಾಯಕ್ಕಾಗಿ ಜನತೆಯ ಬದುಕನ್ನು ಬಲಿಕೊಡುತ್ತಿರುವ ನಮ್ಮ ರಾಜ್ಯದ ಮುಖ್ಯಮಂತ್ರಿಗಳ ಹಲವಾರು ಹುನ್ನಾರಗಳಲ್ಲಿ ಪ್ಲೇವಿನ್ ಲಾಟರಿ ಇತ್ತೀಚಿನದು. ರಾಜ್ಯದ ಎಲ್ಲ ನಗರಗಳಲ್ಲಿ ಈ ಹೈಟೆಕ್ ಮಟ್ಕಾ ಸರಕಾರಿ ಕೃಪೆಯಿಂದಲೇ ನಡೆಯುತ್ತಿರುವುದು ದುರಂತ : ರಾಜ್ಯದ ಪ್ಲೇವಿನ್ ಲಾಟರಿ ಹುಚ್ಚಿಗೆ ಸಾವಿರಾರು ಜನ ಬಲಿಯಾಗುತ್ತಿದ್ದಾರೆ. ಹಲವಾರು ಜನ ಹುಚ್ಚರಾಗಿದ್ದಾರೆ, ಮತ್ತೆ ಕೆಲವರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಇಂತಹ ಮಾರಿಯ ವಿರುದ್ಧ ಪ್ರಗತಿ ಪರ ಜನ ಸಮೂಹ ಮತ್ತು ಮಹಿಳಾ ಸಂಘಟನೆಗಳು ಪ್ರತಿಭಟನೆಯನ್ನು ಸಾರಿದ್ದಾರೆ.

ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯಂದು ಮಂಡ್ಯದ 'ಸ್ಪಂದನ' ಮಹಿಳಾ ಸದಸ್ಯರು 'ಪ್ಲೇವಿನ್' ಲಾಟರಿಯ ಅಂಗಡಿಗಳಿಗೆ ನುಗ್ಗಿ ಪ್ರತಿಭಟನೆ, ಧರಣಿ ಸತ್ಯಾಗ್ರಹ ನಡೆಸಿದ್ದಾರೆ. ಅನ್ಯಾಯದ ವಿರುದ್ಧ ಬೀದಿಗಿಳಿವ ಇಂತಹ ಮಹಿಳೆಯರನ್ನು ಕುರಿತು ಮುಖ್ಯ ಮಂತ್ರಿಗಳು ಎಷ್ಟೊಂದು ಲಘುವಾಗಿ, ಬೇಜವಾಬ್ದಾರಿತನದಿಂದ ವರ್ತಿಸಿದ್ದಾರೆಂದರೆ ರಾಜ್ಯದ ಜೂಜು ಕೋರ ನೀತಿಗೆ ಅವರ ಸ್ಪಷ್ಟ ನಿಲುವು ನಿದರ್ಶನವಾಗಿದೆ.

ಮುಖ್ಯ ಮಂತ್ರಿಗಳು ಹೋರಾಟಕ್ಕಿಳಿವ ಮಹಿಳೆಯರ ಬಗ್ಗೆ ಹೊಂದಿರುವ ಧೋರಣೆ ಮತ್ತು ಪ್ಲೇವಿನ್ ಲಾಟರಿಯನ್ನು ನಿಲ್ಲಿಸಲಾಗದು ಎಂದಿರುವ ಸರಕಾರದ ನೀತಿಯನ್ನು ಬೆಂಗಳೂರಿನಲ್ಲಿ ಮಹಿಳಾ ಸಂಘಟನೆಗಳು ಪ್ರತಿಭಟಿಸಿದವು. ಹಲವಾರು ಮಹಿಳಾ ಸಂಘಟನೆಗಳ ಒಕ್ಕೂಟವಾದ 'ಸಮನ್ವಯ'ವು ಪ್ಲೇವಿನ್ ಲಾಟರಿಯನ್ನು ವಿರೋಧಿಸಿ ಪ್ರತಿಭಟನಾ ಪ್ರದರ್ಶನ ನಡೆಸಿದ್ದಲ್ಲದೆ, ಈ ಸಂದರ್ಭದಲ್ಲಿ ಮುಖ್ಯ ಮಂತ್ರಿಗಳಿಗೆ ಬಹಿರಂಗ ಪತ್ರವನ್ನು ಬರೆದಿದ್ದಾರೆ. ಅದರ ಪತ್ರ ಇಲ್ಲಿದೆ.

ಗೆ,

ಶ್ರೀ ಎಸ್. ಎಂ. ಕೃಷ್ಣ
ಮಾನ್ಯ ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

ಮಾನ್ಯರೇ,

ಅಂತರರಾಷ್ಟ್ರೀಯ ಮಹಿಳಾ ದಿನದಂದು ಸರ್ಕಾರಿ ಕಾರ್ಯಕ್ರಮದಲ್ಲಿ ನೀವು ಮಹಿಳೆಯರನ್ನು ಕುರಿತಂತೆ ಆಡಿರುವ ನಿಮ್ಮ ಮಾತುಗಳು ಕಟ್ಟಾ ಸಾಂಪ್ರದಾಯಿಕವಷ್ಟೇ ಅಲ್ಲ ಅತ್ಯಂತ ಸಂಕುಚಿತ ಮನೋಭಾವದಿಂದಲೂ ಕೂಡಿದ್ದಾಗಿದೆ. ನಿಜವಾಗಿಯೂ ಇದು ಯಾವುದೇ ಮುಖ್ಯಮಂತ್ರಿಯ ಘನತೆಗೂ ತಕ್ಕುದಲ್ಲ. ಮಹಿಳೆಯರು ಗಂಡಂದಿರನ್ನು ಮಕ್ಕಳನ್ನು ಮದ್ಯದ ಸೆರೆಯಿಂದ ಮುಕ್ತರನ್ನಾಗಿಸುವ, ಜೂಜುಕಟ್ಟೆಗೆ ಹೋಗದಂತೆ ತಡೆಯುವ, ಶೃಂಗಾರದ ಗೊಂಬೆಗಳಾಗಿ ವರ್ತಿಸಬೇಕೆನ್ನುವ ನಿಮ್ಮ ಧೋರಣೆ ನಿಮ್ಮ ವೈಯಕ್ತಿಕ ಅಭಿಪ್ರಾಯವೋ ಅಥವಾ ನಿಮ್ಮ ಸರ್ಕಾರದ ನೀತಿಯೋ? ಜೂಜು, ಮದ್ಯದಂತಹ ದುಶ್ಚಟಗಳಿಂದ ಬರುವ ಪಾಪದ ವರಮಾನವೇ ಮಹಿಳೆಯರ ಅಭಿವೃದ್ಧಿ ಕಾರ್ಯಕ್ರಮಗಳಿಗಾಗಿ ಬಳಸುವ ಸಂಪನ್ಮೂಲವೆಂದು ನೀವು ಹೇಳುವುದಾದರೆ ನಿಮ್ಮ ಸರ್ಕಾರ ಮಹಿಳೆಯರ ಬಗೆಗೆ ಹೊಂದಿರುವ ಕಾಳಜಿಯ ಬಗ್ಗೆ ನಮಗೆ ಅನುಮಾನ ಹುಟ್ಟುತ್ತದೆ. ಅಷ್ಟೇ ಅಲ್ಲ ಆತಂಕ ಕೂಡ, ಇದೇ ಮಾರ್ಚ್ 13ರಂದು ಬೆಂಗಳೂರಿನ ಪುರಭವನದೆದುರು ಬೆಂಗಳೂರಿನ ವಿವಿಧ ಮಹಿಳಾ ಸಂಘಟನೆಗಳ ಒಕ್ಕೂಟವಾದ 'ಸಮನ್ವಯ'ವು 'ಸರ್ಕಾರಿ ಮಹಿಳಾ ದಿನ'ಕ್ಕಿಂತ ಭಿನ್ನವಾಗಿ ಅರ್ಥಪೂರ್ಣವಾದ ಮಹಿಳಾದಿನವನ್ನು ಆಚರಿಸಿತು. ಆ ಸಾರ್ವಜನಿಕ ಸಭೆಯಲ್ಲಿ ನಾವು ತೆಗೆದುಕೊಂಡ ತೀರ್ಮಾನದಂತೆ ನಮ್ಮ ಹಕ್ಕೊತ್ತಾಯಗಳನ್ನು ನಿಮ್ಮ ಗಮನಕ್ಕೆ ತರಲು ಈ ಪತ್ರವನ್ನು ಬರೆಯುತ್ತಿದ್ದೇವೆ.

(ಅ) ಕುಟುಂಬದಲ್ಲಿ ಮಹಿಳೆಯರ ಪಾತ್ರವನ್ನು ಕುರಿತು ನಿಮ್ಮ ಮಾತು ಬೇಜವಾಬ್ದಾರಿತನದಿಂದ ಕೂಡಿದ್ದು ಮಹಿಳೆಯರ ಗೌರವಕ್ಕೆ ಚ್ಯುತಿ ತರುವಂತಹುದಾಗಿದೆ. ಅದನ್ನು ಈ ಕೂಡಲೇ ನೀವು ಸಾರ್ವಜನಿಕವಾಗಿ ಹೇಳಿಕೆಯ ಮೂಲಕ ಹಿಂತೆಗೆದುಕೊಳ್ಳಬೇಕೆಂದು ಆಗ್ರಪಡಿಸುತ್ತೇವೆ.

(ಆ) ಆನ್‌ಲೈನ್ ಲಾಟರಿಯ ಪಿಡುಗನ್ನು ತೊಡೆದುಹಾಕಲು ತಕ್ಷಣವೇ ಅದನ್ನು ರದ್ದು ಮಾಡಲು ಕ್ರಮ ತೆಗೆದುಕೊಳ್ಳಬೇಕು. ಮದ್ಯದ ಮಾರಾಟವನ್ನು ಸಮರ್ಥಿಸಿಕೊಳ್ಳುವುದನ್ನು ಬಿಟ್ಟು ಅದನ್ನು ನಿಷೇಧಿಸುವತ್ತ ನೀವು ಕ್ರಮ ತೆಗೆದುಕೊಳ್ಳಬೇಕು.

(ಇ) ಇತ್ತೀಚೆಗೆ ರಾಯಚೂರಿನಲ್ಲಿ ನಡೆದ ಸಾಮೂಹಿಕ ವಿವಾಹದಲ್ಲಿ ಬಾಲ್ಯ ವಿವಾಹಗಳು ನಡೆದಿದ್ದು ಅದರಲ್ಲಿ ಸಚಿವರು, ಶಾಸಕರು ಮತ್ತು ಜನಪ್ರತಿನಿಧಿಗಳು ಭಾಗವಹಿಸಿದ್ದಾರೆ. ಆ ಕಾರ್ಯಕ್ರಮದ ಸಂಯೋಜಕರು ಮತ್ತು ಭಾಗವಹಿಸಿದವರ ಮೇಲೆ ನೀವು ಕೂಡಲೇ ಕ್ರಮ ಜರುಗಿಸಬೇಕು. ನಮ್ಮ ಈ ಹಕ್ಕೊತ್ತಾಯಗಳಿಗೆ ನೀವು ಸೂಕ್ತವಾಗಿ ಪ್ರತಿಕ್ರಿಯಿಸಬೇಕೆಂದು ನಿರೀಕ್ಷಿಸುತ್ತೇವೆ. ನಮ್ಮ ನಿರೀಕ್ಷೆ ಹುಸಿಯಾದರೆ ರಾಜ್ಯವ್ಯಾಪಿ ಹೋರಾಟವನ್ನು ಹಮ್ಮಿಕೊಳ್ಳುವುದು ಅನಿವಾರ್ಯವಾಗುತ್ತದೆ.

ವಂದನೆಗಳೊಂದಿಗೆ,

ಸಮನ್ವಯ

(ಮಹಿಳಾ ಪರ ಸಂಘಟನೆಗಳ ಒಕ್ಕೂಟ)

**ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ,**
**ಅಖಿಲ ಭಾರತ ಜನವಾದಿ ಮಹಿಳಾ ಸಂಘಟನೆ,**
**ಸುಮಂಗಲಿ, ಸೇವಾಶ್ರಮ,**
**ನೆರವು,**
**ನ್ಯಾಷನಲ್ ಫೆಡರೇಷನ್ ಆಫ್ ಇಂಡಿಯನ್ ವುಮೆನ್**
**ಮತ್ತು ಇನ್ನಿತರ ಮಹಿಳಾ ಸಂಘಟನೆಗಳು.**

RNI No. 45577/88

"Achala" 108, Skyline Surabhi,
14 - P, Vidyapeeta Road,
BSK III Stage,
Bangalore - 560 085

To :

Smt/Sri

CPMG/KA/BG-8/2003-05
Book-Post/News Letter